**ಸರ್ಕಾರದ ಆದೇಶ ಸಂಖ್ಯೆ : ಅಕುಕ 309 ಎಂಎಸ್ಎ 2009, ಬೆಂಗಳೂರು, ದಿನಾಂಕ 29ನೇ ಜನವರಿ, 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ॥ ಎಂ. ಸನತ್‌ಕುಮಾರ್, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸೂರ್ಲಬಿ, ಕೊಡಗು ಜಿಲ್ಲೆ ಇವರನ್ನು ಅನಧಿಕೃತ ಗೈರುಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ – 8 (viii) ರಡಿಯಲ್ಲಿ ಪದತ್ತವಾದ ಅಧಿಕಾರಗಳನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಸಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪದ್ಮಾವತಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿಆರ್–615

## ಇಂಧನ ಸಚಿವಾಲಯ

**ವಿಷಯ :** M/s Vijay Durga Power Projects Pvt. Ltd. ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್ಇಡಿ/06/ಸೋಮೇಶ್ವರ/2007/2863, ದಿನಾಂಕ 29–12–2007/8–1–2008.

2. ದಿನಾಂಕ 13–2–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Vijay Durga Power Projects Pvt. Ltd. ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕು, ಕೆಳ ಚಾವಡಿ ಗ್ರಾಮದ ಬಳಿ ಸೀತಾ ನದಿಯ ಬಲದಂಡೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 13–2–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Vijay Durga Power Projects Pvt. Ltd. ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಎನ್‌ಸಿಇ 2008, ಬೆಂಗಳೂರು, ದಿನಾಂಕ: 23–2–2010.**

M/s Vijay Durga Power Projects Pvt. Ltd. ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕು, ಕೆಳ ಚಾವಡಿ ಗ್ರಾಮದ ಬಳಿ ಸೀತಾ ನದಿಯ ಬಲದಂಡೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 13º27`54" Longitude : 75º04'45" ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 591

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 39 ಅಚವಿ 2008, ದಿನಾಂಕ : 24–10–2009,

2. ವ್ಯವಸ್ಥಾಪಕ ನಿರ್ದೇಶಕರು ಕೆಬಿಟ್ಸ್ ಹಾಗೂ ಅಧ್ಯಕ್ಷರು, ಬಿಪಿಓ ಸ್ಕ್ರೀನಿಂಗ್ ಕಮಿಟಿ ಇವರ ಪತ್ರದ ಸಂಖ್ಯೆ : ಕೆಬಿಟ್ಸ್/ಕೈ.ಉ.ಅ/ ಗ್ರಾ ಬಿಪಿಓ–ಭಾಲ್ಕಿ–ಔರಾದ್/43(3)/2009–10, ದಿನಾಂಕ: 17–2–2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸಲು ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು ಕೆಬಿಟ್ಸ್ ಇವರ ಪತ್ರದಲ್ಲಿ ಮೆ : ಟಾಟಾ ಬ್ಯುಸಿನೆಸ್ ಸಪೋರ್ಟ್ ಸರ್ವೀಸಸ್ ಲಿ. ರವರು ಔರಾದ್/ಭಾಲ್ಕಿಯಲ್ಲಿ ಗ್ರಾಮೀಣ ಬಿಪಿಓ ಘಟಕ ಸ್ಥಾಪಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿದ್ದು, ಅದರಂತೆ ದಿನಾಂಕ 24–12–2009 ರಂದು ನಡೆದ ಗ್ರಾಮೀಣ ಬಿಪಿಓ ಸಭೆಯಲ್ಲಿ ಸದರಿ ಘಟಕವನ್ನು ರದ್ದುಗೊಳಿಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ 24–10–2009ರ ಸರ್ಕಾರಿ ಆದೇಶದ ಅನುಬಂಧದಲ್ಲಿನ ಕ್ರಮ ಸಂಖ್ಯೆ (3) ರಲ್ಲಿ ಅನುಮೋದಿಸಿದ್ದ ಮೆ : ಟಾಟಾ ಬ್ಯುಸಿನೆಸ್ ಸಪೋರ್ಟ್ ಸರ್ವೀಸಸ್ ಲಿ. ಗೌರಾ ಟ್ರಿನಿಟಿ, ಚಿರಾನ್ ಫೋರ್ಟ್ ಲೇನ್, ಬೇಗಂ ಪೇಟ್, ಹೈದರಾಬಾದ್–500016 ರವರು ಬೀದರ್ ಜಿಲ್ಲೆಯ ಔರಾದ್/ಭಾಲ್ಕಿ ಗ್ರಾಮೀಣ ಬಿಪಿಓ ಘಟಕವನ್ನು ಸ್ಥಾಪಿಸಲು ಅನುಮೋದಿಸಿರುವುದನ್ನು ರದ್ದುಗೊಳಿಸಿ ಆದೇಶ ಹೊರಡಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 26–2–2010.**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿನ ಅನುಬಂಧದ ಕ್ರಮ ಸಂಖ್ಯೆ 3 ರಲ್ಲಿ ಮೆ : ಟಾಟಾ ಬ್ಯುಸಿನೆಸ್ ಸಪೋರ್ಟ್ ಸರ್ವೀಸಸ್ ಲಿ. ಗೌರಾ ಟ್ರಿನಿಟಿ, ಚಿರಾನ್ ಫೋರ್ಟ್ ಲೇನ್, ಬೇಗಂ ಪೇಟ್, ಹೈದರಾಬಾದ್–500016 ರವರಿಗೆ ಬೀದರ್ ಜಿಲ್ಲೆಯ ಔರಾದ್/ಭಾಲ್ಕಿ ಗ್ರಾಮೀಣ ಬಿಪಿಓ ಕೇಂದ್ರವನ್ನು ತೆರೆಯಲು ಅನುಮೋದಿಸಿದ್ದನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ವಿ. ಕೃಷ್ಣಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 592

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಡಿ.ಬಿ. ಕಡ್ಲಿ, ಮುಖ್ಯ ಅಧೀಕ್ಷಕರು (ಅಮಾನತ್ತಿನಲ್ಲಿರುವ), ಬೆಳಗಾಂ ಕೇಂದ್ರ ಕಾರಾಗೃಹ, ಬೆಳಗಾಂ, ಇವರ ವಿರುದ್ದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಕರ್ತವ್ಯಕ್ಕೆ ತೆಗೆದುಕೊಳ್ಳುವ ಬಗ್ಗೆ

**ಓದಲಾಗಿದೆ :**
1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ: ಎನ್‌ಕ್ವೈಯರಿ/ಸಿಆರ್.5/2009, ದಿನಾಂಕ : 21–5–2009.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 42 ಪಿಆರ್‌ಇ 2009, ದಿನಾಂಕ : 8–6–09.
3. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಆದೇಶ ಸಂಖ್ಯೆ : ವಿಚಾರಣೆ/ಸಿಆರ್–5/2009–10, ದಿನಾಂಕ : 6–8–2009
4. ಶ್ರೀ ಡಿ.ಬಿ. ಕಡ್ಲಿ, ಮುಖ್ಯ ಅಧೀಕ್ಷಕರು, ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿ ದಿನಾಂಕ 6–7–2009
5. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಸಂಖ್ಯೆ : ಎನ್‌ಕ್ವೈಯರಿ/ಸಿಆರ್–5/2009, ದಿನಾಂಕ : 21–7–2009.

**ಪ್ರಸ್ತಾವನೆ :**

ಬೆಳಗಾವಿ ಕೇಂದ್ರ ಕಾರಾಗೃಹದ ವಿಚಾರಣಾ ಬಂಧಿ ಸಂಖ್ಯೆ : 6415 ನಾಗೇಂದ್ರರೆಡ್ಡಿ, ತಂದೆ ಮದನಮೋಹನ ರೆಡ್ಡಿ, ಈತನನ್ನು ಒಳರೋಗಿಯಾಗಿ ಬೆಳಗಾವಿಯ ಜಿಲ್ಲಾ ಸರ್ಕಾರಿ ಆಸ್ಪತ್ರೆಗೆ ದಾಖಲಿಸಲಾಗಿತ್ತು. ಆಗ, ಈತನು ಅಲ್ಲಿ ಕರ್ತವ್ಯದ ಮೇಲಿದ್ದ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಪೊಲೀಸ್ ಪೇದೆ ಸಂಖ್ಯೆ : 84 ಶ್ರೀ ಚಂದ್ರಕಾಂತ್ ಎನ್. ಕಾಂಬ್ಳೆಯವರಿಗೆ ಇರಿದು, ಮಾರಣಾಂತಿಕ ಹಲ್ಲೆ ನಡೆಸಿ, ಪರಾರಿಯಾಗಿದ್ದನು. ಪೊಲೀಸ್ ಪೇದೆಯವರಿಗೆ ತುರ್ತ ಚಿಕಿತ್ಸೆಗಾಗಿ ಬೆಳಗಾವಿಯ ಕೆ.ಎಲ್.ಇ. ಆಸ್ಪತ್ರೆಗೆ ದಾಖಲಿಸಲಾಗಿತ್ತು. ಚಿಕಿತ್ಸೆ ಫಲಕಾರಿಯಾಗದೆ ಅವರು ಮರಣ ಹೊಂದಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ (1)ರ ಪತ್ರದೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದ ವರದಿಯಲ್ಲಿ ಈ ಘಟನೆಗೆ ಸಂಬಂಧಿಸಿದಂತೆ ಶ್ರೀ ಡಿ.ಬಿ. ಕಡ್ಲಿ, ಮುಖ್ಯ ಅಧೀಕ್ಷಕರು, ಹಾಗೂ ಶ್ರೀ ಎಂ.ಹೆಚ್. ಕುಂಬಾರ್, ಮುಖ್ಯ ವೀಕ್ಷಕರು, ಬೆಳಗಾವಿ ಕೇಂದ್ರ ಕಾರಾಗೃಹ ಬೆಳಗಾವಿ, ಇವರು ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿದೆ ಎಂದೂ ಸದರಿಯವರುಗಳ ವಿರುದ್ಧ ಸೂಕ್ತ ಶಿಸ್ತಿನ ಕ್ರಮ ತೆಗೆದುಕೊಳ್ಳಬೇಕೆಂದು ತಿಳಿಸಿದ್ದರು.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ವರದಿಯನ್ನು ಪರಿಶೀಲಿಸಿ ಮತ್ತು ವರದಿಯಲ್ಲಿನ ಅಂಶಗಳ ಆಧಾರದ ಮೇರೆಗೆ, ಸರ್ಕಾರವು ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ಡಿ.ಬಿ. ಕಡ್ಲಿ. ಮುಖ್ಯ ಅಧೀಕ್ಷಕರು, ಬೆಳಗಾವಿ ಕೇಂದ್ರ ಕಾರಾಗೃಹ ಹಾಗೂ ಶ್ರೀ ಎಂ.ಹೆಚ್. ಕುಂಬಾರ್, ಮುಖ್ಯ ವೀಕ್ಷಕರು, ಬೆಳಗಾವಿ, ಕೇಂದ್ರ

ಕಾರಾಗೃಹ, ಇವರು ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣದ ಹಿನ್ನೆಲೆಯಲ್ಲಿ, ಸದರಿಯವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1) (ಡಿ) ರನ್ವಯ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿರುತ್ತದೆ.

ಆನಂತರ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ (3)ರ ಅವರ ಆದೇಶದಲ್ಲಿ, ಶ್ರೀ ಎಂ.ಹೆಚ್. ಕುಂಬಾರ್ ಮುಖ್ಯ ವೀಕ್ಷಕರು, ಬೆಳಗಾವಿ ಕೇಂದ್ರ ಕಾರಾಗೃಹ, ಬೆಳಗಾವಿ, ಇವರ ವಿರುದ್ಧ ಮುಂದೆ ಜರುಗತಕ್ಕ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(5)(ಸಿ) ರಲ್ಲಿನ ಅಧಿಕಾರವನ್ನು ಬಳಸಿ, ಸದರಿಯವರ ನಿಲಂಬನದ ಆದೇಶವನ್ನು ರದ್ದುಪಡಿಸಿ, ಬೆಳಗಾವಿ ಕೇಂದ್ರ ಕಾರಾಗೃಹದಲ್ಲಿಯೇ ಕರ್ತವ್ಯದಲ್ಲಿ ಮುಂದುವರಿಸಿರುತ್ತಾರೆ.

ಅಮಾನತ್ತಿಗೊಳಪಟ್ಟ ಶ್ರೀ ಡಿ.ಬಿ. ಕಡ್ಲಿ, ಮುಖ್ಯ ಅಧೀಕ್ಷಕರು, ಇವರು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರ ಮುಖೇನ ದಿನಾಂಕ 6–7–2009 ರಂದು ಸರ್ಕಾರಕ್ಕೆ ಸಲ್ಲಿಸಿದ ಓದಲಾದ (4)ರ ಮೇಲೆ ಸಲ್ಲಿಸಿದ ಮನವಿಯಲ್ಲಿ ದಿನಾಂಕ 10–5–2009 ರಂದು ನಡೆದ ಘಟನೆಯ ಬಗ್ಗೆ ವಾಸ್ತವಿಕ ಅಂಶಗಳನ್ನು ತಿಳಿಸುತ್ತಾ, ಸದರಿ ಘಟನೆಗೆ ಅವರು ಕಾರಣರಲ್ಲವೆಂದೂ, ಯಾವುದೇ ಕರ್ತವ್ಯಲೋಪವೆಸಗಿಲ್ಲವೆಂದು ತಿಳಿಸುತ್ತಾ, ಅವರ ಅಮಾನತ್ತು ಆದೇಶವನ್ನು ರದ್ದುಪಡಿಸಿ, ಕರ್ತವ್ಯಕ್ಕೆ ತೆಗೆದುಕೊಳ್ಳಬೇಕೆಂದು ಕೋರಿರುತ್ತಾರೆ.

ಈ ಕೋರಿಕೆಯ ಮೇರೆಗೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಹಾಗೂ ಕಾರಾಗೃಹಗಳ ಮಹಾನಿರೀಕ್ಷಕರವರು ಸರ್ಕಾರಕ್ಕೆ ಬರೆದ ಮೇಲೆ ಓದಲಾದ (5)ರ ಪತ್ರದಲ್ಲಿ, ಶ್ರೀ ಡಿ.ಬಿ. ಕಡ್ಲಿ, ಮುಖ್ಯ ಅಧೀಕ್ಷಕರು (ಅಮಾನತ್ತಿನಲ್ಲಿರುವ) ಇವರ ಮನವಿಯನ್ನು ಮಾನವೀಯತೆ ಮತ್ತು ಅನುಕಂಪದ ದೃಷ್ಠಿಯಿಂದ ಪರಿಗಣಿಸಿ, ಕಾರಾಗೃಹ ಇಲಾಖೆಯಲ್ಲಿ ಅಧಿಕಾರಿ/ಸಿಬ್ಬಂದಿಗಳ ಕೊರತೆ ಇರುವುದರಿಂದ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ರದ್ದುಪಡಿಸಿ, ಕರ್ತವ್ಯಕ್ಕೆ ತೆಗೆದುಕೊಳ್ಳವಂತೆ ಕೋರಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 42 ಪಿಆರ್‌ಇ 2009, ಬೆಂಗಳೂರು, ದಿನಾಂಕ: 22–02–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಡಿ.ಬಿ. ಕಡ್ಲಿ, ಮುಖ್ಯ ಅಧೀಕ್ಷಕರು, ಕರ್ನಾಟಕ ಕಾರಾಗೃಹಗಳ ಇಲಾಖೆ, ಇವರ ವಿರುದ್ದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(5)(ಸಿ)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸದರಿಯವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಬಳ್ಳಾರಿ ಕೇಂದ್ರ ಕಾರಾಗೃಹಕ್ಕೆ ಮುಖ್ಯ ಅಧೀಕ್ಷಕರ ಹುದ್ದೆಯಲ್ಲಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿ.ಆರ್. 593

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರ ವಿರುದ್ಧ ಶಿವಮೊಗ್ಗ ಪೊಲೀಸ್ ಠಾಣೆಯಲ್ಲಿ ದಾಖಲಾದ ಗುನ್ನೆ ಸಂ. 5/2009 ಬಗ್ಗೆ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು

**ಓದಲಾಗಿದೆ :**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. ಲೋಕ್/ಐಎನ್‌ವಿ(ಜಿ)/ಸಿಟಿಎಲ್–12/ಸಿಆರ್–5/2009, ಶಿವಮೊಗ್ಗ, ದಿನಾಂಕ 1–9–2009.
2. ತನಿಖಾಧಿಕಾರಿಯ ಅಂತಿಮ ತನಿಖಾ ವರದಿ ದಿನಾಂಕ 30–7–2009
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಆಪಾದಿತ ಅಧಿಕಾರಿಯು ನೀಡಿದ ಸ್ವ ರಕ್ಷಣಾ ಹೇಳಿಕೆ, ಪ್ರಕರಣದ ತನಿಖಾ ಕಾಲದಲ್ಲಿ ಅಮಾನತ್ತು ಪಡಿಸಿದ ದಾಖಲಾತಿಗಳು.

**ಪ್ರಸ್ತಾವನೆ :**

ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಪ್ರಸ್ತುತ ನಿವೃತ್ತ ಇವರ ವಿರುದ್ಧ ಗುನ್ನೆ ಸಂಖ್ಯೆ : 05/2009ರಲ್ಲಿ ಆರಕ್ಷಕ ನಿರೀಕ್ಷಕರು, ಶಿವಮೊಗ್ಗ, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆಯಲ್ಲಿ

ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–2,3) ಮಾನ್ಯ ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ತಮ್ಮ ಪತ್ರದ ದಿನಾಂಕ 1–9–2009 (ಉಲ್ಲೇಖ–1) ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿವಾರಣಾ ಅಧಿನಿಯಮ 1988ರ 19ನೆಯ ಕಲಂ (1)ರಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂ: ಲೋಕ್/ಐಎನ್‌ವಿ(ಜಿ)ಸಿಟಿಎಲ್–12/ಸಿಆರ್–5/2009, ಶಿವಮೊಗ್ಗ ದಿನಾಂಕ 1–9–2009 ರೊಂದಿಗೆ ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಅಂತಿಮ ತನಿಖಾ ವರದಿ ದಿನಾಂಕ : 30–7–2009
2. ಪ್ರಥಮ ವರ್ತಮಾನ ವರದಿ ಮತ್ತು ಫಿರ್ಯಾದಿಯ ದೂರಿನ ನಕಲು, ಪಂಚ ಸಾಕ್ಷಗಳನ್ನು ಬರಮಾಡಿಕೊಳ್ಳಲು ಸಂಬಂಧಪಟ್ಟ ಅಧಿಕಾರಿಗಳಿಗೆ ಸಲ್ಲಿಸಿದ ಕೋರಿಕೆ ಪತ್ರದ ನಕಲುಗಳು, ವಹಿಸುವಿಕೆ, ಜಪ್ತಿ ಪಂಚನಾಮೆ ಮತ್ತು ಪಂಚನಾಮೆಗಳ ನಕಲುಗಳು, ಟ್ರ್ಯಾಪ್ ಯಶಸ್ವಿಯಾದ ಬಗ್ಗೆ ನ್ಯಾಯಾಲಯಕ್ಕೆ ಸಲ್ಲಿಸಿದ ವರದಿಯ ನಕಲು, ಸ್ವತ್ತು ಪಟ್ಟಿ ನಕಲುಗಳು, ತನಿಖಾ ಕಾಲದಲ್ಲಿ ತೆಗೆದಿರುವ ಫೋಟೋಗಳ ಛಾಯಾ ಪ್ರತಿಗಳು.
3. ಸಾಕ್ಷಿದಾರರುಗಳ ಹೇಳಿಕೆಗಳ ಮತ್ತು ಮುಂದುವರಿದ ಹೇಳಿಕೆಗಳ ನಕಲು ಪ್ರತಿಗಳು,
4. 1) ಆಪಾದಿತ ಅಧಿಕಾರಿಯ ಸೇವಾ ವಿವರಗಳ ಮಾಹಿತಿಯಿರುವ ಪ್ರತಿ.
   2) ಸಹಾಯಕ ಕಾರ್ಯಪಾಲಕ ಇಂಜಿನೀಯರ್, ನಂ. 2, ಲೋಕೋಪಯೋಗಿ ಉಪ ವಿಭಾಗ, ತೀರ್ಥಹಳ್ಳಿ ಇವರ ಪತ್ರದ ದಿನಾಂಕ : 20–5–2009ರ ಪ್ರತಿ.
   3) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರ ಪತ್ರದ ದಿನಾಂಕ 15–5–2009 ಹಾಗೂ ಅದರೊಟ್ಟಿಗೆ ಲಗತ್ತಿಸಿರುವ ದಾಖಲೆಗಳ ಪ್ರತಿಗಳು.
   4) ತೀರ್ಥಹಳ್ಳಿ ಪೊಲೀಸ್ ಠಾಣೆ ಮೊಕದ್ದಮೆ ಸಂ. 196/2009ರ ಪ್ರತಿ ಹಾಗೂ ಅದರೊಟ್ಟಿಗೆ ಲಗತ್ತಿಸಿರುವ ದೂರಿನ ಪ್ರತಿ.
5. 1. ರಸಾಯನಿಕ ಪರಿವೀಕ್ಷಕರ ವರದಿಯ ನಕಲು
   2. ಕೃತ್ಯ ನಡೆದ ಸ್ಥಳದ ನಕಾಶೆಯ ಪ್ರತಿ
6. ಆಪಾದಿತ ಅಧಿಕಾರಿಯು ನೀಡಿರುವ ಸ್ವ ರಕ್ಷಣಾ ಹೇಳಿಕೆಯ ನಕಲು.
7. ಪ್ರಕರಣದ ತನಿಖಾ ಕಾಲದಲ್ಲಿ ಅಮಾನತ್ತು ಪಡಿಸಿದ ದಾಖಲಾತಿಗಳು.

ತನಿಖಾಧಿಕಾರಿಗಳಾದ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರು ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಶಿವಮೊಗ್ಗ ಲೋಕಾಯುಕ್ತ, ಆರಕ್ಷಕ ಠಾಣೆಯಲ್ಲಿ ಮೊಕದ್ದಮೆ ಸಂ. 5/2009ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13 (2)ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತ ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಪ್ರಸ್ತುತ ಅಮಾನತ್ತಿನಲ್ಲಿರುವ ಫಿರ್ಯಾದಿಯಾದ ಶ್ರೀ ಕೆ. ಭಾಸ್ಕರಶೆಟ್ಟಿ ತಂದೆ ಲೇಟ್. ಕೆ.ಎಸ್. ಕೃಷ್ಣಯ್ಯ, ರಂಜದಕಟ್ಟೆ, ದೂರ್ವಾಸಪುರ ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಇವರ ಲಾರಿಯಲ್ಲಿ ಮರಳು ತುಂಬಿಕೊಂಡು ಬರುತ್ತಿದ್ದಾಗ ತಹಶೀಲ್ದಾರರು ಫಿರ್ಯಾದುದಾರರ ವಾಹನವನ್ನು ತಡೆದು, ರೂ. 3,000/– ರೂಗಳ ದಂಡನೆಯನ್ನು ವಿಧಿಸಿರುತ್ತಾರೆ. ಇದಾದ ಸುಮಾರು 8–10 ದಿನಗಳ ನಂತರ ಫಿರ್ಯಾದುದಾರರು ತಹಶೀಲ್ದಾರರನ್ನು ಭೇಟಿ ಮಾಡಿ 50 ಲೋಡ್ ಮರಳನ್ನು ತನ್ನ ಮನೆಯ ಪಕ್ಕ ದಾಸ್ತಾನು ಮಾಡಿಕೊಳ್ಳುತ್ತೇನೆಂದು ದಿನಾಂಕ 4–5–2009 ರಂದು ತಹಶೀಲ್ದಾರರನ್ನು ಕೇಳಿಕೊಂಡಾಗ, ತಹಶೀಲ್ದಾರ್‌ರವರು ರೂ. 10,000/–ಗಳನ್ನು ಕೊಡಬೇಕು ಎಂದು ಫಿರ್ಯಾದುದಾರರಿಗೆ ತಿಳಿಸಿರುತ್ತಾರೆ. ಆದ್ದರಿಂದ ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ : 7–5–2009 ರಂದು ತಹಶೀಲ್ದಾರರ ಕ್ವಾರ್ಟಸ್, ತೀರ್ಥಹಳ್ಳಿ ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಅಕ್ರಮ ಸಂಭಾವನೆಯಾದ 10,000/– ರೂಗಳನ್ನು ಸದರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಪಿಂಗಾಣಿ ಬಟ್ಟಲುಗಳಲ್ಲಿ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫೀನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು

ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 10,000/–ಗಳನ್ನು ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು ಇವರ ಅಧಿಕೃತ ಕ್ವಾಟರ್ಸ್‌ನಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಅದೇ ರೀತಿ ತನಿಖಾಧಿಕಾರಿಗಳು, ತನಿಖಾ ಕಾಲದಲ್ಲಿ ತೀರ್ಥಹಳ್ಳಿ ತಾಲ್ಲೂಕು ಕಛೇರಿಯಿಂದ ಮಾಹಿತಿಗಳನ್ನು ಪಡೆದಿರುತ್ತಾರೆ ಮತ್ತು ತನಿಖಾ ಕಾಲದಲ್ಲಿ ದಾಖಲೆಗಳನ್ನು ಅಮಾನತ್ ಪಡಿಸಿಕೊಂಡಿರುತ್ತಾರೆ. ತನಿಖಾ ಕಾಲದಲ್ಲಿ ಸಾಕ್ಷ್ಯಾಧಾರಗಳು ಲಭ್ಯವಾಗಿದ್ದು ಆರೋಪಗಳನ್ನು ರುಜುವಾತುಪಡಿಸುತ್ತವೆ.

ಈ ಎಲ್ಲಾ ಕಾರಣಗಳಿಂದ ಭ್ರಷ್ಟಾಚಾರ ನಿವಾರಣಾ ಅಧಿನಿಯಮ 1988ರ ಕಲಂ 7, 13(1)(ಡಿ) ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಭ್ರಷ್ಟಾಚಾರ ನಿವಾರಣಾ ಅಧಿನಿಯಮ 1988ರ ಅನ್ವಯ ಕಲಂ, 13(1)(ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತವನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದಾಗಿರುತ್ತದೆ. ಹಾಗೂ ಈ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 (iii) ರಡಿಯಲ್ಲಿ ಸಕ್ಷಮ ಪ್ರಾಧಿಕಾರಿಯಾಗಿರುತ್ತದೆ. ಆದ್ದರಿಂದ, ಲಂಚ ನಿರೋಧಕ ಕಾಯ್ದೆ, 1988 ಕಲಂ 19 (1)ರ ಅಡಿ ಆಪಾದಿತ ನೌಕರನಾದ ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್ ತೀರ್ಥಹಳ್ಳಿ ತಾಲ್ಲೂಕು (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರನ್ನು ಕಲಂ 7 ಮತ್ತು 13 (1) (ಡಿ) ಜೊತೆಗೆ 13(2)ರ ಅಡಿಯಲ್ಲಿ ಭ್ರಷ್ಟಾಚಾರ ನಿವಾರಣಾ ಅಧಿನಿಯಮ 1988 ಹಾಗೂ ಕಲಂ 409, 468 ಐಪಿಸಿ ಪ್ರಕಾರ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್ 08 ಎಡಿಇ 2009, ಬೆಂಗಳೂರು, ದಿನಾಂಕ: 16–02–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಆರೋಪಿಯಾದ ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್ ತೀರ್ಥಹಳ್ಳಿ ತಾಲ್ಲೂಕು ಪ್ರಸ್ತುತ ಅಮಾನತ್ತಿನಲ್ಲಿರುವ ಇವರನ್ನು ಹುದ್ದೆಯಿಂದ ತೆಗೆದು ಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರಿದವಾದ ಸರ್ಕಾರವು ಇವರನ್ನು ಬ್ರಷ್ಟಾಚಾರ ನಿವಾರಣಾ ಅಧಿನಿಯಮ ಕಲಂ 7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ 13 (2)ರ ಪ್ರಕಾರ ಹಾಗೂ ಐ.ಪಿ.ಸಿ ಕಲಂ 409, 468 ಅಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಐ.ಪಿ.ಸಿ ಕಾಯ್ದೆ 19(1) (ಸಿ) ಹಾಗೂ ಕಲಂ 197 ಸಿಆರ್‌ಪಿಸಿ ಅಡಿಯಲ್ಲಿ ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19 (1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ದಿನಾಂಕ 16–2–2010 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 594

**(ಎಸ್.ಬಿ. ಸಸಾಲಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಹೊಸದಾಗಿ ರಚಿಸಿರುವ ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಅಗತ್ಯವಿರುವ ಸಿಬ್ಬಂದಿ ಹುದ್ದೆಗಳ ಸೃಜನೆ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 59 ಭೂದಾಮು 2008, ದಿನಾಂಕ 26–12–2009.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 71 ಭೂದಾಮು 2009, ದಿನಾಂಕ 9–12–2009.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಗ್ರಾಅಪ : 202 ಕೆಎಸ್ಎಸ್ 2009, ದಿನಾಂಕ 30–12–2009.
4. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 1029 ವೆಚ್ಚ–7/2009, ದಿ. 29–12–2009
5. ಜಿಲ್ಲಾಧಿಕಾರಿ, ಯಾದಗಿರಿ ಇವರ ಪತ್ರ ಸಂಖ್ಯೆ : ಕಂ : ಜಿಯಾಜಿ/ಆಡಳಿತ/ಸಿಆರ್/2009–10, ದಿ. 4–1–2010

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ಪಟ್ಟಣವನ್ನು ಕೇಂದ್ರಸ್ಥಾನವನ್ನಾಗಿರಿಸಿ, ಹೊಸದಾಗಿ ಯಾದಗಿರಿ ಜಿಲ್ಲೆಯನ್ನು ರಚಿಸಿ, ದಿನಾಂಕ : 30–12–2009 ರಿಂದ ಜಾರಿಗೆ ಬರುವಂತೆ ಅಂತಿಮ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿ: 9–12–2009 ರ ಸರ್ಕಾರದ ಆದೇಶದಲ್ಲಿ ಹೊಸದಾಗಿ ರಚಿಸಲಾಗಿರುವ ಯಾದಗಿರಿ ಜಿಲ್ಲೆಯಲ್ಲಿ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಒಟ್ಟು 67 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ದಿನಾಂಕ : 30–12–2009ರ ಆದೇಶದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗೆ ಸಂಬಂಧಿಸಿದಂತೆ ಒಟ್ಟು 23 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರ.ಸಂ. (4) ರಲ್ಲಿ ಓದಲಾದ ದಿನಾಂಕ : 29–12–2009 ರ ಅಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಯಾದಗಿರಿ ಜಿಲ್ಲೆ ರಚನೆ ಸಂಬಂಧ ಪ್ರತಿ ಇಲಾಖೆಯಲ್ಲಿ ಸಿಬ್ಬಂದಿ ಮಾದರಿ ರಚನೆಯನ್ವಯ ಅವಶ್ಯಕವಿರುವ ಹುದ್ದೆಗಳಲ್ಲಿ ಶೇ. 25 ರಷ್ಟು ಹುದ್ದೆಗಳನ್ನು ಅಡ್ ಹಾಕ್ (Ad-hoc) ಆಧಾರದ ಮೇಲೆ ಸೃಜಿಸಲು ಒಪ್ಪಿಗೆ ನೀಡಿರುತ್ತದೆ.

ಮೇಲೆ ಕ್ರ.ಸಂ. (5) ರಲ್ಲಿ ಓದಲಾದ ದಿನಾಂಕ : 4–1–2010 ರ ಪತ್ರದಲ್ಲಿ ಜಿಲ್ಲಾಧಿಕಾರಿ, ಯಾದಗಿರಿ ಇವರು, ನೂತನ ಯಾದಗಿರಿ ಜಿಲ್ಲೆಗೆ ವಿವಿಧ ಇಲಾಖೆಗಳಿಗೆ ಅವಶ್ಯಕತೆ ಇರುವ (ಒಟ್ಟು 71 ಇಲಾಖೆಗಳಿಗೆ) ಹೊಸದಾಗಿ 901 ಹುದ್ದೆಗಳನ್ನು ಸೃಜಿಸಬೇಕಾಗುತ್ತದೆ ಎಂದು ಕೋರಿರುತ್ತಾರೆ.

ಮೇಲ್ಕಂಡ ಹಿನ್ನಲೆಯಲ್ಲಿ ಹೊಸದಾಗಿ ರಚಿಸಿರುವ ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಅವಶ್ಯಕವಿರುವ ಶೇ. 25 ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ (Ad-hoc) ಆಧಾರದ ಮೇಲೆಸೃಜಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 71 ಭೂದಾಪು 2009, ಬೆಂಗಳೂರು, ದಿನಾಂಕ: 23–02–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗೆ ಸಂಬಂಧಿಸಿದಂತೆ ಸಿಬ್ಬಂದಿ ಮಾದರಿ ರಚನೆ ಅನ್ವಯ ಅವಶ್ಯಕವಿರುವ ಹುದ್ದೆಗಳಲ್ಲಿ ಶೇ. 25 ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ (Ad-hoc) ಆಧಾರದ ಮೇಲೆ ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಸಂಬಂಧಪಟ್ಟ ಇಲಾಖೆಗಳು ಈ ಅವಶ್ಯಕತೆ ಇರುವ ಹುದ್ದೆಗಳನ್ನು ಗುರುತಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಿ, ಶೀಘ್ರವೇ ಭರ್ತಿ ಮಾಡಿಕೊಳ್ಳತಕ್ಕದ್ದು. ಈ ಹುದ್ದೆಗಳಿಗೆ ಆಯವ್ಯಯ ಅವಕಾಶವನ್ನು ಸಹ ಕಲ್ಪಿಸಲು ಕ್ರಮ ಕೈಗೊಳ್ಳತಕ್ಕದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 1029 ವೆಚ್ಚ–7/2009, ದಿನಾಂಕ : 29–12–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 595

**(ಬಿ.ವಿ. ಚೌಕೀಮಠ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

## COMMERCE AND INDUSTRIES SECRETARIAT

**Sub :** Approval to the Project Proposal of M/s. Manjushree Technopack Ltd., to setup a unit for manufacturing Pet Containers, Jars and Bottles, at Harohalli Industrial Area, Ramanagar District.

**Read :** Proceedings of the 20$^{th}$ State High Level Clearance Committee (SHLCC) meeting held on 05-01-2010.

**Preamble:**

M/s. Manjushree Technopack Ltd., proposes to establish a unit for manufacturing Pet Containers, Jars and Bottles, at Harohalli Industrial Area, Ramanagar District, with an investment of Rs. 92 crores, generating employment to about 450 persons.

In the 20$^{th}$ State High Level Clearance Committee (SHLCC) meeting held on 05-01-2010, the proposal of the Company has been approved.

Government has examined the recommendations made by the State High Level Clearance Committee in the 20$^{th}$ Meeting held on 05-01-2010, in all aspects.

Hence the following Order.

**GOVERNMENT ORDER NO. CI 68 SPI 2010, BANGALORE, DATED 23RD FEBRUARY 2010**

Government is pleased to accord in principle approval for the project proposal of M/s. Manjushree Technopack Ltd., to establish a unit for manufacturing Pet Containers, Jars and Bottles, at Harohalli Industrial Area, Ramanagar District, with an investment of Rs. 92 crores, generating employment to about 450 persons and extend the following infrastructure facilities, incentives and concessions.

**Infrastructure Facilities** :

1. **Land :** 10 acres – KIADB land in Harohalli Industrial Area, Ramanagara District.
2. **Power :** 3000 KVA BESCOM.
3. **Water :** 1 MLD from KIADB.
4. **Incentives & Concessions :** As applicable under New Industrial Policy 2009-14.

**General Terms and Conditions :**

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub-assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall provide employment to atleast one member of the family of each land looser as the land is being acquired through KIADB.
   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period to two years from the date of issue.

By Order and in the name of the Governor of Karnataka,

PR. 588

**Aparna Pavate**

Desk Officer (Technical Cell)

Commerce & Industries Department.

**COMMERCE AND INDUSTRIES SECRETARIAT**

**Sub :** Approval to the Project of Proposal M/s. Bhadrashree Steel and Power Ltd., to setup 2 x 100 TPD Sponge Iron Plant, 15 MW Captive Power Plant, 2 x 10 MT Induction Furnace and 200 TPD Rolling Mill, with in the existing premises of Kunikere Village, Koppal Taluk and District.

**Read :** Proceedings of the 20th State High Level Clearance Committee (SHLCC) meeting held on 05-01-2010.

**Preamble:**

M/s. Bhadrashree Steel & Power Ltd., proposes to establish 2 x 100 TPD Sponge Iron Plant, 15 MW Captive Power Plant, 2 x 10 MT Induction Furnace and 200 TPD Rolling Mill, within their existing premises at Kunikere Village, Koppal Taluk and District, with an investment of Rs. 146.83 crores, generating employment to about 425 persons.

In the 20th State High Level Clearance Committee (SHLCC) meeting held on 05-01-2010, the proposal of the Company has been approved.

Government has examined the recommendations made by the State High Level Clearance Committee in the 20th Meeting held on 05-01-2010, in all aspects.

Hence the following Order.

**GOVERNMENT ORDER NO. CI 26 SPI 2010, BANGALORE, DATED 23RD FEBRUARY 2010**

Government is pleased to accord in principle approval for the project proposal of M/s. Bhadrashree Steel & Power Ltd., to establish 2 x 100 TPD Sponge Iron Plant, 15 MW Captive Power Plant, 2 x 10 MT Induction Furnace and 200 TPD Rolling Mill, with in their existing premises at Kunikere Village, Koppal Taluk and District, with an investment of Rs. 146.83 crores, generating employment to about 425 persons and extend the following infrastructure facilities, incentives and concessions.

**Infrastructure Facilities** :

1. **Land :** Existing premises.
2. **Power :** 15 MW from GESCOM.
3. **Water :** 1.13 MLD from own sources.
4. **Incentives & Concessions :** As applicable under New Industrial Policy 2009-14.

**General Terms and Conditions :**

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period to two years from the date of issue.

PR. 589

By Order and in the name of the Governor of Karnataka,
**Aparna Pavate**
Desk Officer (Technical Cell)
Commerce & Industries Department.

**COMMERCE AND INDUSTRIES SECRETARIAT**

**Sub :** Approval to the Project Proposal of M/s. Dynamatic Technologies Ltd., to manufacture Aerospace Components in 35 acres of land in KIADB Aerospace Industrial Area, Devanahalli Taluk, Bangalore Rural District.

**Read :** Proceedings of the 20th State High Level Clearance Committee (SHLCC) meeting held on 05-01-2010.

**Preamble:**

M/s. Dynamatic Technologies Ltd., proposes to establish a manufacturing unit for Aerospace Components in 35 acres of land in KIADB Aerospace Industrial Area, Devanahalli Taluk, Bangalore Rural District, with an investment of Rs. 465.80 crores, generating employment to about 2100 persons.

In the 20th State High Level Clearance Committee (SHLCC) meeting held on 05-01-2010, the proposal of the Company has been approved.

Government has examined the recommendations made by the State High Level Clearance Committee in the 20th Meeting held on 05-01-2010, in all aspects.

Hence the following Order.

**GOVERNMENT ORDER NO. CI 59 SPI 2010, BANGALORE, DATED 23RD FEBRUARY 2010**

Government is pleased to accord in principle approval for the project proposal of M/s. Dynamatic Technologies Ltd., to establish a manufacturing unit for Aerospace Components in 35 acres of land in KIADB Aerospace Industrial Area, Devanahalli Taluk, Bangalore Rural District, with an investment of Rs. 465.80 crores, generating employment to about 2100 persons and extend the following infrastructure facilities, incentives and concessions.

**Infrastructure Facilities** :

1. **Land :** 35 acres – KIADB Aerospace Industrial Area, Devanahalli Taluk, Bangalore Rural District.
2. **Power :** 1750 KVA from BESCOM.
3. **Water :** 24 KLD from KIADB.
4. **Incentives & Concessions :** As applicable under New Industrial Policy 2009-14.

**General Terms and Conditions :**

1. **MOU :** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of Human Resources Development plan shall be sent to the Commissioner for I.D. & Director of Industries and Commerce for monitoring.

4. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period to two years from the date of issue.

By Order and in the name of the Governor of Karnataka,
**Aparna Pavate**
Desk Officer (Technical Cell)
Commerce & Industries Department.

PR. 590

## ಕೃಷಿ ಸಚಿವಾಲಯ

**ವಿಷಯ :** ಶ್ರೀ N. ಬೈಲಯ್ಯ, ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞರು) ಜಂಟಿ ಕೃಷಿ ನಿರ್ದೇಶಕರ ಕಚೇರಿ, ಮಡಿಕೇರಿ ಇವರಿಗೆ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ :** 1. ಕೃಷಿ ಆಯುಕ್ತರ ಪತ್ರ ಸಂ. ಕೃಸಿಪ–(1)/ವಿವ–74/2009–10, ದಿನಾಂಕ 04–02–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ N. ಬೈಲಯ್ಯ, ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞರು), ಜಂಟಿ ಕೃಷಿ ನಿರ್ದೇಶಕರ ಕಚೇರಿ, ಮಡಿಕೇರಿ ಇವರು ಕೌಟುಂಬಿಕ ಕಾರಣಗಳಿಂದಾಗಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ 26–11–2009ರ ಮನವಿಯೊಂದಿಗೆ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣಾ ಷರತ್ತುಗಳಿಗೊಳಪಟ್ಟು ದಿನಾಂಕ 28–2–2010 ರಿಂದ ಅನ್ವಯಿಸುವಂತೆ ಸ್ವ–ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಕೃತೋಇ 278 ಕೃಪಸೇ 2009, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ N. ಬೈಲಯ್ಯ, ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞರು), ಜಂಟಿ ಕೃಷಿ ನಿರ್ದೇಶಕರ ಕಚೇರಿ, ಮಡಿಕೇರಿ ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ 28–2–2010 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 285(1)(ಎ) ಅನ್ವಯ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಗುರಾಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.

ಪಿ.ಆರ್.621

## ಕೃಷಿ ಸಚಿವಾಲಯ

**ವಿಷಯ :** ಶ್ರೀ ಸರದಾರ್ ದಿಲಾವರ್ ಖಾನ್, ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞರು) ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೆಂಗಳೂರು ನಗರ ಜಿಲ್ಲೆ ಇವರಿಗೆ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ :** 1. ಕೃಷಿ ಆಯುಕ್ತರ ಪತ್ರ ಸಂ. ಕೃಸಿಪ–(1)/ವಿವ–75/2009–10, ದಿನಾಂಕ 04–02–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರೀ ಸರದಾರ್ ದಿಲಾವರ್ ಖಾನ್, ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞರು), ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೆಂಗಳೂರು ನಗರ ಜಿಲ್ಲೆ ಇವರು ಕೌಟುಂಬಿಕ ಕಾರಣಗಳಿಂದಾಗಿ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ 26–10–2009ರ ಮನವಿಯೊಂದಿಗೆ ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವಾದ್ದರಿಂದ ಬಾಕಿ/ಬೇಬಾಕಿ ಪತ್ರಗಳ ನಿರೀಕ್ಷಣಾ ಷರತ್ತುಗಳಿಗೊಳಪಟ್ಟು ದಿನಾಂಕ 28–2–2010 ರಿಂದ ಅನ್ವಯಿಸುವಂತೆ ಸ್ವ–ಇಚ್ಛಾ ನಿವೃತ್ತಿಗೆ ಅನುಮತಿ ನೀಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಕೃತೋಇ 42 ಕೃಪಸೇ 2009, ಬೆಂಗಳೂರು, ದಿನಾಂಕ 26ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಸರದಾರ್ ದಿಲಾವರ್ ಖಾನ್, ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞರು), ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೆಂಗಳೂರು ನಗರ ಜಿಲ್ಲೆ ಇವರಿಗೆ ಅವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಅದನ್ನು ಅವರಿಗೆ ನೀಡಬೇಕಾದ ನಿವೃತ್ತಿ ಸವಲತ್ತುಗಳಿಂದ ವಸೂಲಿ ಮಾಡುವ ಷರತ್ತಿಗೊಳಪಟ್ಟು ದಿನಾಂಕ 28–2–2010 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 285(1)(ಎ) ಅನ್ವಯ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಗುರಾಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.

ಪಿ.ಆರ್.622

## ENERGY SECRETARIAT

**Sub :** Conversion of Interest Free Loan of Rs.500 crores released to ESCOMs in 2008-09 as Equity for 2009-10 – Reg.

**Read :**
1. Cabinet decision of 06-11-2008 (Rs. 200 crores).
2. Cabinet decision of 09-01-2009 (on file No.EN 65 EEB 2008)
3. G.O. No. EN 86 PSR 2008/P1, dated 01-12-2008
4. G.O. No. EN 86 PSR 2008/P1, dated 16-12-2008
5. G.O. No. EN 391 NCE 2008, dated 30-12-2008
6. G.O. No. EN 86 PSR 2008, dated 19-01-2009
7. G.O. No. EN 86 PSR 2008/P1, dated 31-01-2009
8. G.O. No. EN 391 NCE 2008, dated 07-02-2009
9. G.O. No. EN 391 PSR 2008, dated 11-03-2009
10. G.O. No. EN 86 PSR 2008, dated 30-03-2009
11. G.O. No. EN 391 NCE 2008, dated 31-03-2009
12. Cabinet decision on 23-12-2009 (on file No. EN 67 PSR 2009)
13. D.O. letter No. PCKL/A12/162/2008-09/5055, dated 29-01-2010 of Managing Director, PCKL.

**Preamble :**

1. The State of Karnataka has been reeling under acute power shortage in the year 2008-09 which continued into the first quarter of 2009-10, and reached alarming and extra-

ordinary levels of power deficit. Other factors such as reduced availability of water from the hydro generating stations in Karnataka due to poor rainfall, reduction in power available from Central Sector Generation Station etc., added to the power deficit.

2. It was the considered opinion of the Government to take special measures to protect public interest to deal with the unprecedented power deficit situation in the State. Power Company of Karnataka Limited (PCKL)/Karnataka Power Transmission Corporation Limited (KPTCL) has been authorized to purchase high cost energy on behalf of ESCOMs from November 2008 to May 2009 to provide power by ESCOMs in Rural areas for definite time period of 6 hours in three phase and 6 hours in single phase as per the programme formulated by individual ESCOMs and 24 hours of power supply in Urban areas.
3. PCKL/KPTCL on behalf of ESCOMs procured short term high cost energy of 3809.83 MUs at a total cost of Rs.2639.31 crores (including UI) for the period from 16-11-2008 to 31-05-2009.
4. Since ESCOMs faced problems to meet the cash needs of the short term high cost energy procurement, Government vide G.O. read at (3) to (9) above released in 2008-09 an amount of Rs. 500 crores to ESCOMs through PCKL (i.e. Rs. 50+50+75+50+50+75+150 crores respectively) initially under the Head of Account "2801-80-101-1-04-106 (NP)".
5. In Government Orders read at (10) & (11) above, the amount of Rs.500 crores released as at para 4 above, was subsequently modified into interest free loan w.r.t. Supplementary Estimates-II 2008-09 as under :

Rs. In crores

| Head of Account | G.O. No./date | |
|---|---|---|
| 6801-00-800-1-01-394 (Plan) | EN 86 PSR 2008/30-3-2009 | 350.00 |
| 6801-00-800-1-01-294 (NP) | EN 391 NCE 2008/31-03-2009 | 150.00 |
| | Total | 500.00 |

6. The matter including para-3 and 4 above, was placed before the Cabinet in the meeting held on 23-12-2009.
7. Managing Director, PCKL in his letter read at (13) above, has reported that the amount of Rs.500 crores as per para-4 & 5 released by Government, has been allocated to ESCOMs as under :

| | | Rs. In crores |
|---|---|---|
| 1) | HESCOM | 220.35 |
| 2) | GESCOM | 67.34 |
| 3) | CESC | 70.52 |
| 4) | BESCOM | 119.15 |
| 5) | MESCOM | 22.64 |
| | **Total** | **500** |

8. Government has examined the proposal in detail to convert the interest free loan of Rs.500 crores released in 2008-09 to ESCOMs referred in para 4 & 5 above, as 'Equity support to ESCOMs' for FY 2009-10. Accordingly the following Order is issued.

**Government Order No. EN 67 PSR 2009, Bangalore, Dated 01st March 2010**

1) In the circumstances explained in the preamble, Government are pleased to accord approval to convert the interest free loan of Rs.500 crores (Rupees five hundred crores only) released to ESCOMs in 2008-09, as equity for the financial year 2009-10 as under :

| | | Rs. In crores |
|---|---|---|
| 1) | HESCOM | 220 |
| 2) | GESCOM | 70 |
| 3) | CESC | 70 |
| 4) | BESCOM | 118 |
| 5) | MESCOM | 22 |
| | | **Total 500** |

2) The required entries with head of account, in the Government Account, to be carried out after approval of the Supplementary Estimates 2009-10.

3) This order is issued with the concurrence of Finance Department vide their U.O. Note No. FD 98 Exp-I/2010 dated 11-02-2010.

By Order and in the name of the Governor of Karnataka,
**S.J. SAMPATH KUMAR,**
Under Secretary to Government,
Energy Department

PR. 623

## ಇಂಧನ ಸಚಿವಾಲಯ

**ವಿಷಯ :** ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬಜೆ ಕಿರು ಜಲ ವಿದ್ಯುತ್ ಯೋಜನೆಯನ್ನು 3.8 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಇಂಇ 87 ಎನ್‌ಸಿಇ 2003, ದಿನಾಂಕ 2–8–2003.
2. ಸರ್ಕಾರಿ ಆದೇಶ ಸಂಖ್ಯೆ ಇಎನ್ 87 ಎನ್‌ಸಿಇ 2003, ದಿನಾಂಕ 10–2–2004.
3. ಸರ್ಕಾರಿ ಆದೇಶ ಸಂಖ್ಯೆ ಇಎನ್ 18 ಎನ್‌ಸಿಇ 2007, ದಿನಾಂಕ 7–2–2007.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆ.ಆರ್.ಇ.ಡಿ./06/ಬಜೆ/2009/4110, ದಿನಾಂಕ 11–12–2009.
5. ಸರ್ಕಾರದ ಪತ್ರ ಸಂಖ್ಯೆ ಇಎನ್ 622 ಎನ್‌ಸಿಇ 2009, ದಿನಾಂಕ 13–1–2010.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆ.ಆರ್.ಇ.ಡಿ./06/ಬಜೆ–ಎಂಹೆಚ್‌ಎಸ್/2010/252, ದಿನಾಂಕ 23/25–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಹಿರಿಯಡ್ಕ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 3.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಯೋಜನೆಯ ಕಾಲಾವಕಾಶವನ್ನು ದಿನಾಂಕ 11–2–2007 ರಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯ ಸಾಮರ್ಥ್ಯವನ್ನು 3.00 ಮೆಗಾ ವ್ಯಾಟ್‌ನಿಂದ 3.8 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರಿ ಪತ್ರದಲ್ಲಿ ಸದರಿ ಯೋಜನೆಯ ಸ್ಥಳ ಪರಿವೀಕ್ಷಣೆ ಮಾಡಿ ವಾಸ್ತವಾಂಶವನ್ನು ದೃಢಪಡಿಸಿಕೊಂಡು ವರದಿಯನ್ನು ನೀಡಲು ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ನೀಡಿರುವ ಪ್ರಗತಿಯ ಕುರಿತ ಮಾಹಿತಿ ಹಾಗೂ ದಿನಾಂಕ 19-01-2010 ರಂದು ನಡೆಸಿದ ಸ್ಥಳ ಪರಿವೀಕ್ಷಣಾ ವರದಿಯನ್ನು ಕಳುಹಿಸುತ್ತಾ, ಸಾಮರ್ಥ್ಯ ಹೆಚ್ಚುವರಿ ಪ್ರಸ್ತಾವನೆಯನ್ನು ಪರಿಗಣಿಸಲು ಶಿಫಾರಸ್ಸು ಮಾಡಿರುತ್ತಾರೆ.

ಯೋಜನಾ ಅನುಷ್ಠಾನಕ್ಕಾಗಿ ನೀಡಲಾಗಿದ್ದ ವರದಿಯು ದಿನಾಂಕ 10-02-2010 ರಂದು ಮುಕ್ತಾಯಗೊಂಡಿರುತ್ತದೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 622 ಎನ್‌ಸಿಇ 2009, ಬೆಂಗಳೂರು, ದಿನಾಂಕ 23ನೇ ಫೆಬ್ರವರಿ 2010**

ಮೆ॥ ದೇವರ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಹಿರಿಯಡ್ಕ ಗ್ರಾಮದ ಬಳಿ ಸ್ವರ್ಣ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ ಬಜೆ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3.00 ಮೆಗಾ ವ್ಯಾಟ್‌ನಿಂದ 3.8 ಮೆಗಾ ವ್ಯಾಟ್‌ಗೆ ಹೆಚ್ಚಿಸಿ, ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 7.02.2010 ರಿಂದ ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿದೆ.

ಈ ಯೋಜನೆಯನ್ನು ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸದಿದ್ದಲ್ಲಿ ನೀಡಿರುವ ಪರವಾನಗಿಯನ್ನು ಹಿಂಪಡೆಯಲಾಗುವುದೆಂಬ ಷರತ್ತಿಗೊಳಪಟ್ಟು ಯೋಜನೆಯ ಸಾಮರ್ಥ್ಯವನ್ನು ಹೆಚ್ಚಿಸಲಾಗಿದೆ.

ಈ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ಸಂಪತ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.624

## ಇಂಧನ ಸಚಿವಾಲಯ

**ವಿಷಯ :** M/s. Sai Spurthi Power Private Limited ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ ಕೆ.ಆರ್.ಇ.ಡಿ./06/ಸಿರಸಿ/2007/2987, ದಿನಾಂಕ 24/29-1-2008.
2. ದಿನಾಂಕ 13-2-2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. Sai Spurthi Power Private Limited ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನ ಮಸ್ಕಿ ಗ್ರಾಮದ ಬಳಿ ಬಿಳಿಹಳ್ಳಕ್ಕೆ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 23-10-2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s. Sai Spurthi Power Private Limited ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯ ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :-

**ಸರ್ಕಾರದ ಆದೇಶ ಸಂಖ್ಯೆ ಇಎನ್ 57 ಎನ್‌ಸಿಇ 2008, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2010**

M/s. Sai Spurthi Power Private Limited ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನ ಮಸ್ಕಿ ಗ್ರಾಮದ ಬಳಿ ಬಿಳಿಹಳ್ಳಕ್ಕೆ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ.400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಆವಿಷ್ಕರಿಸುವುದಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿ.ಪಿ.ಎ.) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
13. The developer should bear the risk of submersion in the event of Bedthi Scheme implemented by KPCL.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ಸಂಪತ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.625

## ENERGY SECRETARIAT

**Sub :** Constitution of Technical Committee to Review/Formulate the guidelines for capacity allotment/enhancement of Mini Hydro/Wind Projects-reg.

**Read :** Letter No. KRED/06/Framework-enhancement/09-3841, dated 24-11-2009 and letter No. KRED/06/Framework-enhancement/09/4118, dated 15-12-2009 from the Managing Director, Karnataka Renewable Energy Development Limited.

**Preamble:**

At present there are no comprehensive guidelines/circular instructions regarding capacity allotment/enhancement especially in respect of Mini Hydro and Wind Energy Projects.

In the letters read at above, the Managing Director, Karnataka Renewable Energy Development Limited has sent a proposal to constitute a Technical Committee with the representatives from KPTCL,KPCL, Energy Department, Forest Department, Irrigation Department, KREDL etc.,

There is an absolute necessity of formulating comprehensive guidelines in order to ensure transparency and objectivity in capacity allotment/enhancement of mini hydro and wind projects in the State. The proposal of the Managing Director, KREDL has been examined in detail and issued following Orders :

**Government Order No. EN 16 NCE 2010, Bangalore, Dated 24th February 2010**

In the circumstances explained in the preamble, Government are pleased to Constitute a Technical Committee consisting of the following members to Review/Formulate the guidelines for capacity allotment/enhancement of Mini Hydro/Wind Power Projects with immediate effect and until further Orders:

| | | |
|---|---|---|
| 1 | The Manager Director,<br>Karnataka Renewable Energy Development Limited, Bangalore | Chairman |
| 2 | The Manager Director,<br>Power Company of Karnataka Limited, Bangalore | Member |
| 3 | The Deputy Secretary to Government,<br>Energy Department, Bangalore | Member |
| 4 | The Chief Engineer (Design & Investigation),<br>Karnataka Power Corporation Limited, Bangalore | Member |

| | | |
|---|---|---|
| 5 | The Chief Engineer (Planning & Monitoring),<br>Karnataka Power Transmission Corporation Limited, Bangalore | Member |
| 6 | The Conservator of Forests (Forest Conservation),<br>Forest Department, Bangalore | Member |
| 7 | The Special Officer (Technical, MMI-3),<br>Water Resources Department, Bangalore | Member |
| 8 | The Executive Engineer (Project),<br>Energy Department, Bangalore | Member |
| 9 | The Executive Engineer-2, EMC Section,<br>Energy Department, Bangalore | Member |
| 10 | The Special Officer,<br>Karnataka Renewable Energy Development Limited, Bangalore | Convener |

The committee shall finalise guidelines within one month and submit its report to Government.

By Order and in the name of Governor of Karnataka,

**S.J. SAMPATH KUMAR,**

Under Secretary to Government,

PR. 626

Energy Department

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೇಲೂರು ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯ ಅಂದಾಜು ಮೊತ್ತ ರೂ.1690.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ವ್ಯ.ನಿ. ಕನನೀಸ ಒಚ ಮಂಡಳಿ ಬೆಂಗಳೂರು ರವರ ಪತ್ರ ಸಂಖ್ಯೆ/ಕ.ಜ.ಮಂ/ತಾಂತ್ರಿಕ/ಬೇಲೂರು–ನೀ.ಸ.ಯೋ/3966/2009–10, ದಿನಾಂಕ 09–03–2009.

**ಪ್ರಸ್ತಾವನೆ :**

ಬೇಲೂರು ಪಟ್ಟಣವು ಹಾಸನ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರಗಳಲ್ಲಿ ಒಂದಾಗಿದ್ದು. 2001 ರ ಜನಗಣತಿ ಪ್ರಕಾರ ಈ ಪಟ್ಟಣದ ಜನಸಂಖ್ಯೆಯು 19,241 ಇದ್ದು ಹಾಲಿ 25,000 ಇರುತ್ತದೆ. ಈ ಪಟ್ಟಣಕ್ಕೆ ಮೊದಲನೆ ಹಂತದ ನೀರು ಸರಬರಾಜು ಯೋಜನೆಯನ್ನು ಯಗಚಿ ನದಿ ಮೂಲದಿಂದ 0.90 ಎಂ.ಎಲ್.ಡಿ. ಸಾಮರ್ಥ್ಯದ ಜಲಶುದ್ಧೀಕರಣ ಘಟಕವನ್ನು 1963 ರಲ್ಲಿ ನಿರ್ಮಿಸಿ ಚಾಲನೆಗೊಳಿಸಲಾಯಿತು. ಎರಡನೇ ಹಂತದಲ್ಲಿ ಜಲಸಂಗ್ರಹಾಗಾರ ವಿತರಣಾ ಜಾಲ ಹಾಗೂ ಇತ್ಯಾದಿ ಕಾಮಗಾರಿಗಳನ್ನು ಒಳಗೊಂಡ ಯೋಜನೆಯನ್ನು 1975ರಲ್ಲಿ ಚಾಲನೆಗೊಳಿಸಲಾಯಿತು. ಯಗಚಿ ನದಿಯಲ್ಲಿ ನೀರಿನ ಹರಿವು ಕಡಿಮೆಯಾದ್ದರಿಂದ ಸಾಕಷ್ಟು ಪ್ರಮಾಣದಲ್ಲಿ ನೀರು ಸರಬರಾಜು ಆಗದ ಕಾರಣ ಯಗಚಿ ಜಲಾಶಯವನ್ನು ಮೂಲವಾಗಿಟ್ಟುಕೊಂಡು 2001 ರಲ್ಲಿ AUWSP ಯೋಜನೆಯಡಿ ತಲಾ ದಿನಂಪ್ರತಿ 100 ಲೀಟರ್ ನಂತೆ 2021 ಕ್ಕೆ ಅಂದಾಜಿಸಲಾದ 30000 ಜನಸಂಖ್ಯೆಗೆ ನೀರು ಪೂರೈಕೆ ಮಾಡಲು ವಿನ್ಯಾಸಿಸಿ, ಯೋಜನೆಯನ್ನು 2002–03ರಲ್ಲಿ ಚಾಲನೆಗೊಳಿಸಲಾಯಿತು.

ಪ್ರಸ್ತುತ ಪಟ್ಟಣವು ಬೆಳೆಯುತ್ತಿದ್ದು, ಹಾಲಿ ಇರುವ ನೀರು ಸರಬರಾಜು ವ್ಯವಸ್ಥೆಯಲ್ಲಿ ಜಲಸಂಗ್ರಹಾಗಾರಗಳ ಕೊರತೆಯಿದ್ದು, ಅಭಿವೃದ್ಧಿಗೊಂಡಿರುವ ಬಡಾವಣೆಗಳಿಗೆ ವಿತರಣಾ ಜಾಲದ ವ್ಯವಸ್ಥೆ ಇರುವುದಿಲ್ಲ. ಬೇಸಿಗೆಯಲ್ಲಿ ವಿದ್ಯುತ್‌ಚ್ಛಕ್ತಿ ಅಭಾವದಿಂದ ನೀರು ಸರಬರಾಜಿನಲ್ಲಿ ವ್ಯತ್ಯಯ ಉಂಟಾಗುತ್ತದೆ. ಆದ್ದರಿಂದ ಪಟ್ಟಣದ ನೀರು ಸರಬರಾಜು ವ್ಯವಸ್ಥೆಯನ್ನು ಉತ್ತಮಗೊಳಿಸಲು ನೀರಿನ ಬೇಡಿಕೆಯನ್ನು ತಲಾ ದಿನಂಪ್ರತಿ 135 ಲೀಟರ್‌ನಂತೆ ಪರಿಗಣಿಸಿ 2041 ಕ್ಕೆ ಅಂದಾಜಿಸಲಾದ 45,000 ಜನಸಂಖ್ಯೆಗೆ ಯೋಜನೆಯನ್ನು ವಿನ್ಯಾಸಿಸಲಾಗಿದೆ.

ಈ ಯೋಜನೆಯನ್ನು ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ 2008–09 ನೇ ಸಾಲಿನ ದರಪಟ್ಟಿಯನ್ವಯ ರೂ.1690.00 ಲಕ್ಷಗಳಿಗೆ ತಯಾರಿಸಿ **ಕೊಳವೆ ನೀರು ಸರಬರಾಜು ಯೋಜನೆಯಡಿ** ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಮೇಲೆ ಓದಲಾದ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಯೋಜನೆಯನ್ನು ಮಂಡಳಿಯ 2009–10ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ರೂ.564.00 ಲಕ್ಷಗಳನ್ನು ಪ್ರಸ್ತುತ ಸಾಲಿನಲ್ಲಿ ಅನುವು ಮಾಡಲಾಗಿದೆ.

ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ನಅಇ 10 ಯುಡಬ್ಲ್ಯೂಎಸ್ 2009, ಬೆಂಗಳೂರು, ದಿನಾಂಕ 2ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೇಲೂರು ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯ ಅಂದಾಜು ಮೊತ್ತ ರೂ.1690.00 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಆರು ನೂರ ತೊಂಬತ್ತು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **"ಕೊಳವೆ ನೀರು ಸರಬರಾಜು ಯೋಜನೆಯಡಿ"** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) ETP and escalation charges should not be more than 5% and the Estimate should be revised accordingly.
2) Water rates as proposed by KUWS&DB have to be implemented to meet O&M cost.
3) KTPP provisions, quality control and timely completion of the Project should be ensured.
4) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000 ನ್ನು ಪಾಲಿಸುವುದು.
5) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 18, Exp-9 : 2010, ದಿನಾಂಕ 29–01–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ನಾರಾಯಣಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.627

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಉಪ್ಪಾರಹಳ್ಳಿ ಸಣ್ಣ ನೀರಾವರಿ ಕೆರೆಯ ಮುಳುಗಡೆ ಪ್ರದೇಶದಲ್ಲಿ ಬರುವ ನೇರ್ಲಹಳ್ಳಿ ಗ್ರಾಮದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಠೇವಣಿ ಇಡುವ ಬಗ್ಗೆ.

**ಓದಲಾಗಿದೆ** : 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 26–02–2010 ರಂದು ಅಂತ್ಯಗೊಂಡ ಪತ್ರ ಸಂಖ್ಯೆ : ಮುಸದ/ಲೇಶಾಕೆ/ ಲೆಸ1/3/ಭೂಸ್ವಾಧೀನ/2009–10/538.

2) ಸುತ್ತೋಲೆ ಸಂಖ್ಯೆ : ಕಂಇ 42 ಭೂಸ್ವಾಹಾ 2000, ದಿನಾಂಕ 08–10–2001.

3) ಸರ್ಕಾರದ ಆದೇಶ ಸಂಖ್ಯೆ : ಸನೀಇ127ಭೂಸ್ವಾಪ್ರ 2006, ದಿನಾಂಕ 25–11–2006

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಊಪ್ಪಾರಳ್ಳಿ ಸಣ್ಣ ನೀರಾವರಿ ಕೆರೆಯ ಮುಳುಗಡೆ ಪ್ರದೇಶದಲ್ಲಿ ಬರುವ ನೇರ್ಲಹಳ್ಳಿ ಗ್ರಾಮದ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಹಾಗೂ ಪರಿಹಾರ ಧನದ ಮುಂಗಡ ಠೇವಣಿ ಪಾವತಿಸಲು ಹಣ ಬಿಡುಗಡೆ ಕುರಿತು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಉಪ್ಪಾರಳ್ಳಿ ಸಣ್ಣ ನೀರಾವರಿ ಕೆರೆಯ ಮುಳುಗಡೆ ಪ್ರದೇಶದಲ್ಲಿ ಬರುವ ನೇರ್ಲಹಳ್ಳಿ ಗ್ರಾಮದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಗಾಗಿ ಈಗಾಗಲೇ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ರೂ. 2,94,000–00ಗಳನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡುವ ಸಲುವಾಗಿ ಬಿಡಗಡೆ ಮಾಡಲಾಗಿದೆ.

ಕಂದಾಯ ಇಲಾಖೆಯು ಮೇಲೆ ಓದಲಾದ (2)ರ ಸುತ್ತೋಲೆಯಲ್ಲಿ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಿ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ. 50ರಷ್ಟನ್ನು ಹಾಗೂ ಭೂಸ್ವಾಧೀನ ಕಾಯ್ದೆ ಕಲಂ 6(1)ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಬಾಕಿ ಮೊತ್ತವನ್ನು ಮುಂಗಡ ಹಣವಾಗಿ ಭೂಸ್ವಾಧೀನಾಧಿಕಾರಿಗಳಲಿ ಠೇವಣಿ ಇಡಲು ಸೂಚಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 38 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2010**

ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಉಪ್ಪಾರಳ್ಳಿ ಸಣ್ಣ ನೀರಾವರಿ ಕೆರೆಯ ಮುಳುಗಡೆ ಪ್ರದೇಶದಲ್ಲಿ ಬರುವ ನೇರ್ಲಹಳ್ಳಿ ಗ್ರಾಮದ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ರೂ. 2,94,000–00 (ಎರಡು ಲಕ್ಷದ ತೊಂಭತ್ತು ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡುವ ಸಲುವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 676

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ** : ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು ಕೌಳೂರು ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಅದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 24–11–09 ರಂದು ಕೊನೆಗೊಂಡ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2008–09/6986.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕು ಕೌಳೂರು ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 28–11–91

ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 27–07–93.

ಕೌಳೂರು ಗ್ರಾಮದ ಕೆರೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಸದರಿ ಗ್ರಾಮದ ಸ.ನಂ.ಗಳ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಬೇಕಾಗಿದೆ. ಇದರಲ್ಲಿ ಕೆಲವೊಂದು ಪ್ರಕರಣಗಳಿಗೆ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಅಭಿಪ್ರಾಯ ನೀಡಿದೆ. ಇತರೆ ಪ್ರಕರಣಗಳಲ್ಲಿ ಕಾನೂನು ಇಲಾಖೆಯ ಅಭಿಪ್ರಾಯ ಪಡೆದ ಬಗ್ಗೆ ಮಾಹಿತಿ ಇರುವುದಿಲ್ಲ. ಆದಾಗ್ಯೂ ಎಲ್ಲಾ ಪ್ರಕರಣಗಳಲ್ಲಿಯ ಜಮೀನನ್ನು ಒಂದೇ ಕೆರೆಗೆ ಹಾಗೂ ಒಂದೇ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡಿದ್ದು ಹಾಗೂ ಒಂದೇ ಸಾಮಾನ್ಯ ತೀರ್ಪು ಆಗಿದೆ. ಆದ್ದರಿಂದ ಈ ಹಂತದಲ್ಲಿ ಮೇಲ್ಮನವಿ ಸಲ್ಲಿಸುವಂತಹ ಯಾವುದೇ ಆಂಶಗಳು ಈ ಪ್ರಕರಣದಲ್ಲಿ ಕಂಡು ಬರುವುದಿಲ್ಲ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಕೌಳೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 276/96 | 375/ಎ | 0–03 | 3299 |
| 2 | 295/96 | 69/ಇ | 1–00 | 44038 |
| 3 | 292/96 | 31/ಎ | 0–13 | 14511 |
| 4 | 293/96 | 69/ಎ | 0–07 | 7704 |
| 5 | 300/96 | 376/ಎ | 1–08 | 52845 |
| 6 | 305/96 | 42/ಎ | 0–13 | 14311 |
| 7 | 318/96 | 36ಇ | 0–04 | 4146 |
| 8 | 319/96 | 36ಎಎ | 0–04 | 4146 |
| 9 | 320/96 | 36ಎ | 0–04 | 4146 |
| 10 | 322/96 | 35 | 0–07 | 7252 |
| 11 | 323/96 | 35 | 0–07 | 7252 |
| 12 | 324/96 | 35 | 0–07 | 7252 |
| 13 | 325/96 | 35 | 0–07 | 7252 |
| 14 | 327/96 | 35 | 0–07 | 7252 |
| 15 | 328/96 | 35 | 0–07 | 7252 |
| 16 | 329/96 | 35 | 0–04 | 4146 |
| 17 | 330/96 | 59/2ಎ | 0–09 | 9906 |
| 18 | 331/96 | 58 | 0–17 | 18716 |
| 19 | 334/96 | 90ಎ | 0–12 | 13212 |
| 20 | 335/96 | 89/4ಎಸಿ | 0–09 | 9906 |
| 21 | 360/96 | 375/ಎಎ | 0–04 | 4409 |
| 22 | 336/96 | 31/ಎ | 1–01 | 45137 |
| 23 | 340/96 | 112/ಎ | 0–10 | 11008 |
| 24 | 341/96 | 112/ಎ | 0–14 | 15412 |
| 25 | 342/96 | 112/ಎಎ | 0–02 | 2201 |
| 26 | 343/96 | 112/ಇ | 0–30 | 33027 |
| 27 | 345/96 | 113 | 0–10 | 11008 |
| 28 | 347/96 | 128/1 | 0–35 | 38531 |
| 29 | 350/96 | 51 | 0–18 | 19811 |
| 30 | 351/96 | 360 | 0–02 | 2201 |
| 31 | 353/96 | 363ಎಎ | 0–04 | 4405 |
| 32 | 354/96 | 363/ಎಎ2 | 0–10 | 11008 |
| 33 | 365/96 | 66 | 0–38 | 41834 |
| 34 | 362/96 | 375/ಇ | 0–05 | 5504 |
| 35 | 363/96 | 67 | 1–22 | 68258 |
| 36 | 368/96 | 41/2ಎ | 0–07 | 7705 |
| 37 | 346/96 | 129/ಎ7ಇ | 0–15 | 16512 |
| 38 | 361/96 | 372 | 0–24 | 26424 |

| | | | | |
|---|---|---|---|---|
| 39 | 364/96 | 63 | 0–34 | 37432 |
| 40 | 303/96 | 85/ಎಎ7ಇ | 1–08 | 52845 |
| 41 | 302/96 | 83/35 | 0–20 | 22018 |
| 42 | 301/96 | 109/110ಎಎಇಇ | 0–35 | 38531 |
| 43 | 299/96 | 65ಎಎಇಇ | 0–21 | 23118 |
| 44 | 298/96 | 65/ಎ | 0–10 | 11008 |
| 45 | 297/96 | 68ಎಎ | 0–28 | 30824 |
| 46 | 296/96 | 69/ಇಇ | 0–04 | 4405 |
| 47 | 332/96 | 90/ಇ | 0–09 | 9906 |
| 48 | 333/96 | 90/ಎಎ | 0–12 | 13212 |
| 49 | 304/96 | 53/ಎ | 0–06 | 6603 |
| 50 | 355/96 | 363/2ಎ | 0–21 | 23117 |
| 51 | 356/96 | 369/ಎಎ | 0–20 | 22019 |
| 52 | 357/96 | 370/ಎಎ | 0–07 | 7705 |
| 53 | 358/96 | 371 | 0–10 | 11008 |
| 54 | 366/96 | 59/1 | 0–06 | 6603 |
| 55 | 367/96 | 41/2ಎ | 0–07 | 7705 |
| 56 | 294/96 | 69/ಎ | 0–01 | 1099 |
| | | | **ಒಟ್ಟು** | **942097** |

***ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 35 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2010**

ಗುಲ್ಬರ್ಗಾ ಜಿಲ್ಲೆ ಯಾದಗೀರ್ ತಾಲ್ಲೂಕು ಕೌಳೂರು ಏತ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೋಳ್ಳಲಾದ ಕೌಳೂರು ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 9,42,097–00 ಗಳನ್ನು (ಒಂಭತ್ತು ಲಕ್ಷದ ನಲವತ್ತೆರಡು ಸಾವಿರದ ತೊಂಭತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನು ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅದೇ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 677

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು ವಜ್ಜಲ ಗ್ರಾಮ ಸ್ಥಳಾಂತರಿಸಿ ಪುನರ್ವಸತಿ ಕೇಂದ್ರ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣ ಠೇವಣಿ ಇಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ಸನೀಇ 43 ವಿಸವಿ 2004, ದಿನಾಂಕ 20–02–2010

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿನಾಂಕ 23–02–2010ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಲೆಪ–1/2009–10/1168.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು ವಜ್ಜಲ ಗ್ರಾಮ ಸ್ಥಳಾಂತರಿಸಿ ಪುನರ್ವಸತಿ ಕೇಂದ್ರ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣ ಠೇವಣಿ ಇಡಲು ಈಗಾಗಲೇ ರೂ. 35,56,630–00ಗಳನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು ವಜ್ಜಲ ಗ್ರಾಮ ಸ್ಥಳಾಂತರಿಸಿ ಪುನರ್ವಸತಿ ಕೇಂದ್ರ ನಿರ್ಮಾಣಕ್ಕಾಗಿ ಮಂಜೂರಾದ ಅಂದಾಜಿನಲ್ಲಿ ನಿಗದಿಪಡಿಸಿದ ಮೊತ್ತ ರೂ. 407,10,000–00ಗಳಾಗಿದ್ದು ಇದರಲ್ಲಿ ಈಗಾಗಲೇ ಬಿಡುಗಡೆ ಮಾಡಿರುವ ಮೊತ್ತ ರೂ. 35,56,630–00ಗಳನ್ನು ಹೊರತುಪಡಿಸಿ ಬಾಕಿ ಮೊತ್ತ ರೂ. 371,53,370–00ಗಳನ್ನು "ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲ್ಕಂಡ ಲೆಕ್ಕಶೀರ್ಷಿಕೆಯಡಿ ರೂ. 99.00,000/– (ತೊಂಭತ್ತೊಂಭತ್ತು ಲಕ್ಷ ರೂಪಾಯಿಗಳು ಮಾತ್ರ) ಲಭ್ಯವಿದ್ದು ಸದರಿ ಪ್ರಕರಣಕ್ಕೆ ಬಿಡುಗಡೆ ಮಾಡಲು ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 43 ವಿಸವಿ 2004, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2010**

ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು ವಜ್ಜಲ ಗ್ರಾಮ ಸ್ಥಳಾಂತರಿಸಿ ಪುನರ್ವಸತಿ ಕೇಂದ್ರ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ರೂ. 99,00,000–00 (ತೊಂಭತ್ತೊಂಭತ್ತು ಲಕ್ಷ ರೂಪಾಯಿಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡುವ ಸಲುವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ "ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಆಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 678

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಮತ್ತು (ಉತ್ತರ) ವಲಯ, ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಚೇರಿ ಉಪಯೋಗಕ್ಕಾಗಿ ಹೊಸ ವಾಹನಗಳನ್ನು ಖರೀದಿಸಲು ಅನುಮತಿ ಕುರಿತು–ಆದೇಶ.

**ಓದಲಾಗಿದೆ** : 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 24–10–2008ರ ಪತ್ರ ಸಂಖ್ಯೆ : ಮುಸದ/ತಾಂಸ–6/ಸ.ಇಂ–14/ವಾಹನಗಳು/2007–08/3968

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ರವರ ದಿನಾಂಕ 06–11–2008ರ ಪತ್ರದ ಸಂಖ್ಯೆ : ಮುಇಂ/ಸಣಿ(ಉ)ವ/ಬಿಜೆಪಿ/ಪಿಬಿ–13/2008–09/5870.

3) ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 360 ಬಿಆರ್‌ಎಸ್ 2009, ದಿನಾಂಕ 2–3–2010.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ವ್ಯಾಪ್ತಿಯಲ್ಲಿ ಬರುವ ವಿಭಾಗಗಳಿಗೆ/ಉಪ ವಿಭಾಗಗಳ ಉಪಯೋಗಕ್ಕಾಗಿ ವಾಹನಗಳನ್ನು ಖರೀದಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾಗಿರುವ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ವ್ಯಾಪ್ತಿಯಲ್ಲಿ ಬರುವ ವಿಭಾಗ/ಉಪ ವಿಭಾಗಗಳ ಉಪಯೋಗಕ್ಕಾಗಿ ವಾಹನಗಳನ್ನು ಖರೀದಿಸಲು ಅನುಮತಿ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 2–3–2010ರ ಆದೇಶದಲ್ಲಿ ಸಣ್ಣ ನೀರಾವರಿ ಇಲಾಖೆಗೆ ಹೊಸ ಜೀಪುಗಳನ್ನು ಖರೀದಿಸುವ ಸಲುವಾಗಿ ಲೆಕ್ಕಶೀರ್ಷಿಕೆ 2702–80–852–1–01–221 (ಯೋಜನೇತರ) ಅಡಿಯಲ್ಲಿ ರೂ. 38.79 ಲಕ್ಷಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಈ ಮೇಲ್ಕಂಡ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 105 ಮಸಾವಿ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ವ್ಯಾಪ್ತಿಯಲ್ಲಿ ಬರುವ ವಿಭಾಗ/ಉಪ ವಿಭಾಗ ಕಛೇರಿಗಳ ಉಪಯೋಗಕ್ಕಾಗಿ ಒಟ್ಟು 7 ಜೀಪುಗಳನ್ನು (ಟಾಟಾ ಸುಮೊ) ಅಂದಾಜು ವೆಚ್ಚ ರೂ. 34.08 ಲಕ್ಷಗಳಲ್ಲಿ ಖರೀದಿಸಲು ಮಂಜೂರಾತಿ ನೀಡಿದೆ.

ಅದೇ ರೀತಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ವ್ಯಾಪ್ತಿಯಲ್ಲಿ ಬರುವ ವಿಭಾಗ/ಉಪ ವಿಭಾಗಗಳ ಕಛೇರಿಗಳ ಉಪಯೋಗಕ್ಕಾಗಿ ಒಟ್ಟು 7 ಜೀಪುಗಳನ್ನು (ಟಾಟಾ ಸುಮೊ) ಒಟ್ಟು ಅಂದಾಜು ವೆಚ್ಚ ರೂ. 34.08 ಲಕ್ಷಗಳಲ್ಲಿ ಖರೀದಿಸಲು ಮಂಜೂರಾತಿ ನೀಡಿದೆ. ಮುಖ್ಯ ಇಂಜಿನಿಯರ್ ರವರು ಅವಶ್ಯಕತೆಗೆ ಅನುಗುಣವಾಗಿ ವಾಹನಗಳನ್ನು ಮರುಹಂಚಿಕೆ ಮಾಡಿಕೊಳ್ಳುವುದು.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು 2009–10ನೇ ಸಾಲಿಗೆ ಲೆಕ್ಕಶೀರ್ಷಿಕೆ "2702–2–80–052–1–01–221 (ಯೋಜನೇತರ) ಹೊಸ ಸರಬರಾಜು ಅಡಿ ಒದಗಿಸಿರುವ ರೂ. 29.37 ಲಕ್ಷ ಅನುದಾನ ಹಾಗೂ ಹೆಚ್ಚುವರಿಯಾಗಿ ಒದಗಿಸಿರುವ ರೂ 38.79 ಲಕ್ಷ ಅನುದಾನದಿಂದ ಭರಿಸುವುದು. ವಾಹನ ಖರೀದಿಗಾಗಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರುರವರಿಗೆ ರೂ. 34.08 ಲಕ್ಷಗಳನ್ನು (ಮೂವತ್ನಾಲ್ಕು ಲಕ್ಷದ ಎಂಟು ಸಾವಿರ ರೂ.ಗಳು ಮಾತ್ರ) ಮತ್ತು ಮುಖ್ಯ ಇಂಜಿನಿಯರ್, ಸಣ್ಣ ನಿರಾವರಿ (ಉತ್ತರ)ವಲಯ, ಬಿಜಾಪುರ ರವರಿಗೆ ರೂ. 34.08 ಲಕ್ಷಗಳನ್ನು (ಮೂವತ್ತ್ನಾಲ್ಕು ಲಕ್ಷದ ಎಂಟು ಸಾವಿರ ರೂ.ಗಳು ಮಾತ್ರ) ಸದರಿ ಲೆಕ್ಕಶೀರ್ಷಿಕೆಯಡಿ ಹಂಚಿಕೆ ಮಾಡಿ ಹೊಸ ಜೀಪುಗಳನ್ನು ಖರೀದಿಸಲು ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಲೋಇ 109 ಆಕೋ–1/10 ದಿನಾಂಕ 20–02–2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 679

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು ಸೀತಾಪುರ ಏತ ನೀರಾವರಿ ಯೋಜನೆಗಾಗಿ ಅರಳಿಕುಪ್ಪೆ ಗ್ರಾಮದ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಮುಂಗಡ ಹಣ ಠೇವಣಿ ಇಡುವ ಬಗ್ಗೆ.

**ಓದಲಾಗಿದೆ** : 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ದಿನಾಂಕ 06–02–2010ರ ಪತ್ರ ಸಂಖ್ಯೆ : ಮುಸದ/ಲೇಶಾಕೆ/ಲೆಸ–1/3/ಭೂಸ್ವಾಧೀನ/2009–10/354.

2) ಸುತ್ತೋಲೆ ಸಂಖ್ಯೆ : ಕಂಇ 42 ಭೂಸ್ವಾಹಾ 2000, ದಿನಾಂಕ : 08–10–2001.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು ಸೀತಾಪುರ ಏತ ನೀರಾವರಿ ಯೋಜನೆಗಾಗಿ ಅರಳಿಕುಪ್ಪೆ ಗ್ರಾಮದ ಸರ್ವೆ ನಂ : 99/1ಎ ಹಾಗೂ ಇತರೆ ಜಮೀನುಗಳಲ್ಲಿ 0–12 ಗುಂಟೆ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳುವ ಹಾಗೂ ಪರಿಹಾರಧನದ ಮುಂಗಡ ಠೇವಣಿ ಪಾವತಿಸಲು ಹಣ ಬಿಡುಗಡೆ ಕುರಿತು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕಂದಾಯ ಇಲಾಖೆಯು ಮೇಲೆ ಓದಲಾದ (2)ರ ಸುತ್ತೋಲೆಯಲ್ಲಿ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಿ ಭೂಸ್ವಾಧೀನ ಕಾಯಿದೆ ಕಲಂ 4(1)ರ ಅಧಿಸೂಚನೆ ಹೊರಡಿಸುವ ಪೂರ್ವದಲ್ಲಿ ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ. 50ರಷ್ಟನ್ನು ಮುಂಗಡ ಹಣವಾಗಿ ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡಲು ಸೂಚಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 37 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2010**

ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು ಸೀತಾಪುರ ಏತ ನೀರಾವರಿ ಯೋಜನೆಗಾಗಿ ಅರಳಿಕುಪ್ಪೆ ಗ್ರಾಮದ ಸರ್ವೆ ನಂ : 99/1ಎ ಹಾಗೂ ಇತರೆ ಜಮೀನುಗಳಲ್ಲಿ ಒಟ್ಟು 0–12 ಗುಂಟೆ ಸ್ವಾಧೀನಪಡಿಸಿಕೊಳ್ಳಲು ರೂ. 30.916/–(ಮೂವತ್ತು ಸಾವಿರದ ಒಂಭೈನೂರ ಹದಿನಾರು ರೂಪಾಯಿಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಇಡುವ ಸಲುವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 680

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–1ರ (ಕೆಷಿಪ್–1) ಅವಧಿ ಮತ್ತು ಯೋಜನಾ ವೆಚ್ಚದ ಪರಿಷ್ಕರಣೆ.

1. ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ–1 (ಕೆಷಿಪ್–1) ರಾಜ್ಯದ ರಸ್ತೆ ಜಾಲದ ಅಭಿವೃದ್ಧಿಗೆ ಸರ್ಕಾರವ ಲೋಕೋಪಯೋಗಿ ಇಲಾಖೆಯಿಂದ ವಿಶ್ವ ಬ್ಯಾಂಕ್ ಬಾಹ್ಯ ನೆರವಿನಲ್ಲಿ ಕೈಗೊಂಡ ಯೋಜನೆಯಾಗಿದ್ದು, 1999–2000ರ ಅವಧಿಯಲ್ಲಿ ಸರ್ಕರದ ಆದೇಶ ಸಂಖ್ಯೆ ಲೋಇ : 21:ಸಿಆರ್ಎಂ: 96, ದಿನಾಂಕ 01–07–1999ರಡಿ ಪ್ರಾರಂಭಿಸಲಾಯಿತು.
2. ಯೋಜನೆಯ ಪ್ರಮುಖ ವಿವರಗಳನ್ನು ಈ ಕೆಳಗೆ ನೀಡಲಾಗಿದೆ.

| | | |
|---|---|---|
| *ಮೂಲ ಯೋಜನಾ ವೆಚ್ಚ ಡಾಲರ್‌ಗಳಲ್ಲಿ | : | ಯುಎಸ್‌ಡಿ 447 ಮಿಲಿಯನ್ |
| *ಮೂಲಕ ಯೋಜನಾ ವೆಚ್ಚ ರೂಪಾಯಿಯಲ್ಲಿ | : | ರೂ. 2030.27 ಕೋಟಿ |

| | | |
|---|---|---|
| *ವಿಶ್ವ ಬ್ಯಾಂಕ್ ನೆರವು | : | ರೂ. 1635 ಕೋಟಿ |
| *ರಾಜ್ಯ ಸರ್ಕಾರದ ಪಾಲು | : | ರೂ. 395 ಕೋಟಿ |
| *ಮೂಲ ಯೋಜನಾ ಅವಧಿ | : | 5 1/2 ವರ್ಷಗಳು |
| *ವಿಶ್ವ ಬ್ಯಾಂಕ್ ಸಾಲ ಪ್ರಾರಂಭಿಕ ದಿನಾಂಕ | : | ಜುಲೈ, 2001 |
| *ಯೋಜನೆಯ ಕಾಮಗಾರಿಗಳ ಮುಕ್ತಾಯ | : | 30ನೇ ಜೂನ್, 2006 |
| *ಯೋಜನೆಯ ಸಾಲದ ಅವಧಿಯ ಮುಕ್ತಾಯ | : | 31ನೇ ಡಿಸೆಂಬರ್ 2006 |

3. ಯೋಜನೆಯಲ್ಲಿ ರಾಜ್ಯ ಹೆದ್ದಾರಿಗಳನ್ನು ಮುಖ್ಯವಾಗಿ ಒಳಗೊಂಡ 2414 ಕಿ.ಮೀ.ಗಳ ಅಭಿವೃದ್ಧಿಯನ್ನು ಕೈಗೊಳ್ಳಲಾಗಿದೆ. ಇದರಲ್ಲಿ 900 ಕಿ. ಮೀ.ಗಳನ್ನು ಕನಿಷ್ಠ 7 ಮೀ. ಅಗಲಕ್ಕೆ ಮೇಲ್ದರ್ಜೆಗೇರಿಸಲಾಗಿದೆ ಹಾಗೂ 1514 ಕಿ.ಮೀಗಳನ್ನು 5.50 ಮೀ ಅಗಲಕ್ಕೆ ಪನಃಶ್ಚೇತನಗೊಳಿಸಲಾಗಿದೆ. ಕೆಷಿಪ್–1 ರಡಿ ರಸ್ತೆ ಕ್ಷೇತ್ರದಲ್ಲಿ ಹೊಸ ಬದಲಾವಣೆಗಳನ್ನು, ಆಧುನಿಕ ವಿನ್ಯಾಸ, ಉತ್ತಮ ನಿರ್ಮಾಣ, ಗುಣ ಪರೀಕ್ಷೆ ವಿಧಾನಗಳು ಸಾಮಾಜಿಕ, ಪರಿಸರ ಹಾಗೂ ರಸ್ತೆ ಸುರಕ್ಷತೆ ಕ್ರಮಗಳನ್ನು ಪರಿಚಯಿಸಲಾಗಿದ್ದು ಇಲಾಖೆಯ ಕಾರ್ಯಕ್ಷಮತೆ ವೃದ್ಧಿಸುವಲ್ಲಿ ನೆರವಾಗಿದೆ.

4. ಯೋಜನೆಯ ಮೂಲ ಯೋಜನಾ ಅವಧಿ ಮತ್ತು ಯೋಜನಾ ವೆಚ್ಚವನ್ನು ನವೆಂಬರ್, 2006ರ ಸರ್ಕಾರದ ಆದೇಶ ಸಂಖ್ಯೆ ಲೋಇ : 55; ಇಎಪಿ : 2006 ದಿನಾಂಕ 25–11–2006 ಅಡಿಯಲ್ಲಿ ಪರಿಷ್ಕರಿಸಲಾಗಿದೆ. ಯೋಜನಾ ವೆಚ್ಚವನ್ನು ರೂ. 2030.27 ಕೋಟಿಗಳಿಂದ ರೂ. 2304.49 ಕೊಟಿಗಳಿಗೆ ಪರಿಷ್ಕರಿಸಲಾಗಿದ್ದು, ಇದರಲ್ಲಿ ರೂ. 275 ಕೋಟಿಗಳ ಹೆಚ್ಚುವರಿ ಮೊತ್ತವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗಿದೆ. ಯೋಜನಾ ಅವಧಿಯನ್ನು 30–06–2006 ರಿಂದ 31–10–2007ರ ವರೆಗೆ ಹಾಗೂ ಯೋಜನಾ ಸಾಲದ ಅವಧಿಯನ್ನು 31–12–2006 ರಿಂದ 31–01–2008ರ ವರೆಗೆ ವಿಸ್ತರಿಸಲಾಗಿದೆ.

5. ಯೋಜನೆಯ ಒಟ್ಟು ರಸ್ತೆ ಉದ್ದವಾದ 2414 ಕಿ.ಮೀ.ಗಳನ್ನು 50 ಗುತ್ತಿಗೆಗಳಾಗಿ 900 ಕಿ.ಮೀ.ಗಳನ್ನು ಮೇಲ್ದರ್ಜೆಗೇರಿಸುವ ಹಾಗೂ 1514 ಕಿ.ಮೀ.ಗಳನ್ನು ಪುನಃಶ್ಚೇತನಗೊಳಿಸುವ ಕಾಮಗಾರಿ ನಿರ್ವಹಿಸಲಾಗಿದ್ದು ಇದರಲ್ಲಿ 47 ಗುತ್ತಿಗೆಗಳ ಕಾಮಗಾರಿ ಪೂರ್ಣಗೊಂಡಿದೆ ಹಾಗೂ ಶೇ. 99.50% ರಷ್ಟು ರಸ್ತೆ ಅಭಿವೃದ್ಧಿ ಪೂರ್ಣಗೊಂಡಿದೆ. ಗುತ್ತಿಗೆ ಎಂ–27 ರಲ್ಲಿ ಅಂಶಿ ಅಭಯಾರಣ್ಯದಲ್ಲಿ ಹಾದು ಹೋಗುವ 19 ಕಿ.ಮೀ.ಗಳನ್ನು ಯೋಜನೆಯ ವ್ಯಾಪ್ತಿಯಿಂದ ಕೈಬಿಡಲಾಗಿದೆ.

6. ಭೂಸ್ವಾಧೀನ ಪ್ರಕ್ರಿಯೆ ರೈಲ್ವೆ ಇಲಾಖೆಯಿಂದ ಅಗತ್ಯ ವಿನ್ಯಾಸ ಪಡೆಯುವುದು ರಸ್ತೆಯ ಕೆಲವು ಭಾಗಗಳು ಅಭಯಾರಣ್ಯ ಪ್ರದೇಶದಲ್ಲಿ ಹಾದು ಹೋಗುತ್ತಿದ್ದು ಹಾಗೂ ಕೆಲವು ಕಾಮಗಾರಿಗಳನ್ನು ಕ್ಲಿಷ್ಟಕರವಾದ ಪರಿಸ್ಥಿತಿಯಲ್ಲಿ ನಿರ್ವಹಿಸಬೇಕಾಗಿದ್ದ ಕಾರಣಗಳಿಂದ ಯೋಜನೆ ಪೂರ್ಣಗೊಳಿಸಲು ವಿಳಂಬವಾಗಿದ್ದು ಯೋಜನಾ ಅವಧಿಯನ್ನು 31–10–2007 ರಿಂದ ಮುಂದೆ ವಿಸ್ತರಿಸುವ ಅಗತ್ಯತೆ ಇರುತ್ತದೆ. ಎಲ್ಲಾ ಸಮಸ್ಯೆಗಳ ನಡುವೆಯೂ ಶೇ. 99 ರಷ್ಟು ಪ್ರಗತಿಯನ್ನು ಸಾಧಿಸಿ ರಸ್ತೆ ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದು ಇನ್ನು ಕೇವಲ 4 ಗುತ್ತಿಗೆ ಕಾಮಗಾರಿಗಳು ಬಾಕಿ ಇರುತ್ತವೆ. (BP-1:1 M 32A:10 ಕಿಮೀ BP-2 ಸೇತುವೆ ಮತ್ತು U3 Br : ಸೇತುವೆ ಬಾಕಿ ಕಾಮಗಾರಿ) ಬಾಕಿ ಇರುವ ಕಾಮಗಾರಿಯನ್ನು ಪೂರ್ಣಗೊಳಿಸಲು ಡಿಸೆಂಬರ್ 2010 ರವರೆಗೆ ಸಮಯದ ಅವಶ್ಯಕತೆ ಇರುತ್ತದೆ.

7. ಮೂಲ ಯೋಜನಾ ಮೊತ್ತವು ರೂ. 2030.27 ಕೋಟಿಗಳಾಗಿದ್ದು ಇದರಲ್ಲಿ ರೂ. 1635.00 ಕೋಟಿ ವಿಶ್ವಬ್ಯಾಂಕ್ ನಿಂದ ಸಾಲದ ರೂಪದಲ್ಲಿಯೂ ಹಾಗೂ ಉಳಿಕೆ ರೂ. 395 ಕೋಟಿಗಳನ್ನು ರಾಜ್ಯ ಸರ್ಕಾರದ ವತಿಯಿಂದಲೂ ಭರಿಸಲಾಗಿತ್ತು. ಸರ್ಕಾರದ ನವೆಂಬರ್ 2006 ದಿನಾಂಕ 25–11–2006ರ ಅನುಸಾರ ಮೂಲ ಯೋಜನಾ ವೆಚ್ಚವನ್ನು ರೂ. 2030.27 ರಿಂದ ರೂ. 2304–49 ಕೋಟಿಗಳಿಗೆ ಪರಿಷ್ಕರಿಸಲಾಯಿತು. ಇದರಲ್ಲಿ ಹೆಚ್ಚುವರಿ ಮೊತ್ತವಾದ ರೂ. 275 ಕೋಟಿಗಳನ್ನು ರಾಜ್ಯ ಸರ್ಕಾರದಿಂದ ಭರಿಸಲಾಗಿದೆ.

8. ಆಗಸ್ಟ್ 2009ರ ಆರ್ಥಿಕ ಪ್ರಗತಿಯಂತೆ ಪರಿಷ್ಕೃತ ಯೋಜನಾ ಮೊತ್ತವಾದ ರೂ. 2304.49 ಕೊಟಿಗಳನ್ನು ಪೂರ್ಣವಾಗಿ ಯೋಜನೆಗೆ ವೆಚ್ಚ ಮಾಡಲಾಗಿದೆ. 50 ಗುತ್ತಿಗೆಗಳಡಿ 30 ಗುತ್ತಿಗೆಗಳ ಕಾಮಗಾರಿ ಅಂತಿಮ ಬಿಲ್ ಇತ್ಯರ್ಥಗೊಂಡಿದೆ. ಪೂರ್ಣಗೊಂಡಿರುವ 17 ಕಾಮಗಾರಿಗಳ ಅಂತಿಮ ಬಿಲ್‌ಗಳ ಹಾಗೂ ಪ್ರಗತಿಯಲ್ಲಿರುವ 3 ಕಾಮಗಾರಿಗಳ ಬಾಬ್ತು ಕೆಷಿಪ್–1 ಯೋಜನೆಗೆ ಪರಿಷ್ಕೃತ ಯೋಜನಾ ವೆಚ್ಚದ ಮೇಲೆ ಇನ್ನೂ ರೂ. 85 ಕೋಟಿಗಳ ಹೆಚ್ಚುವರಿ ಮೊತ್ತದ ಅಗತ್ಯವಿದೆ. ಯೊಜನೆಯ ಅಂತಿಮ ವೆಚ್ಚವು ರೂ. 2389.49 ಕೋಟಿಗಳಾಗಲಿದೆ.

9. ಪರಿಷ್ಕೃತ ಯೋಜನಾ ವೆಚ್ಚಕ್ಕೆ ಹೋಲಿಸಿದಲ್ಲಿ ಸಿವಿಲ್ ಕಾಮಗಾರಿಗಳಲ್ಲಿ ರೂ. 60.55 ಕೋಟಿ ಹಾಗೂ ಸೇವೆಗಳಲ್ಲಿ ರೂ. 25.60 ಕೋಟಿಗಳ ಹೆಚ್ಚುವರಿ ಅಗತ್ಯವಿರುತ್ತದೆ.

10. ಬಾಹ್ಯ ನೆರವಿನ ಯೋಜನೆಗಳಿಗೆ ರಚಿಸಲಾಗಿರುವ ರಾಜ್ಯ ಮಟ್ಟದ ಸಮನ್ವಯ ಸಮಿತಿಯು ದಿನಾಂಕ 24–12–2009ರ ಸಭೆಯಲ್ಲಿ ಕೆಶಿಪ್–1 ಪ್ರಸ್ತಾವನೆಯ್ನು ಪರಿಶೀಲಿಸಿ ಯೋಜನೆಯ ಬಾಕಿ ಕೆಲಸಗಳನ್ನು ಜುಲೈ 2010ರೊಳಗೆ ಪೂರ್ಣಗೊಳಿಸಲು ಸೂಚಿಸಿ ಈ ಕೆಳಕಂಡ ಅಂಶಗಳಿಗೆ ತನ್ನ ಸಹಮತಿ ನೀಡಿರುತ್ತದೆ.
    i) ಕೆಶಿಪ್–1 ಯೋಜನಾ ವೆಚ್ಚವನ್ನು ರೂ. 2304.49 ಕೋಟಿಯಿಂದ ರೂ. 2389.49 ಕೋಟಿಗೆ ಪರಿಷ್ಕರಣೆ.
    ii) ಕೆಶಿಪ್–1 ಯೋಜನಾ ಅವಧಿಯನ್ನು 31–10–2007 ರಿಂದ 31–07–2010 ರವರಿಗೆ ವಿಸ್ತರಣೆ
    iii) ಕೆಶಿಪ್–1 ಗೆ ಅಗತ್ಯವಿರುವ ರೂ. 85 ಕೋಟಿ ಹೆಚ್ಚುವರಿ ಮೊತ್ತವನ್ನು 2009–10ರ ಆರ್ಥಿಕ ಸಾಲಿನಲ್ಲಿ ನೀಡಿರುವ ರೂ. 400 ಕೋಟಿ ಅನುದಾನದಲ್ಲಿ ಭರಿಸಲು ಹಾಗೂ ಪ್ರಸ್ತಾವನೆಯನ್ನು ಸರ್ಕಾರದ ಸಚಿವ ಸಂಪುಟದ ಅನುಮೋದನೆಗೆ ಮಂಡಿಸಲು.
11. ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಕೆಶಿಪ್ ಯೋಜನಾ ಮಂಡಳಿಯು ದಿನಾಂಕ 08–01–2010ರ ಸಭೆಯಲ್ಲಿ ಪ್ರಸ್ತಾವನೆಯನ್ನು ಅನುಮೋದಿಸಿದೆ.
12. ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 5 ಇಎಪಿ 2010, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2010**

ಈ ಕೆಳಗೆ ಸೂಚಿಸಿರುವ ಷರತ್ತುಗಳೊಂದಿಗೆ ಕೆಳಕಂಡ ಅಂಶಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

i) ಕೆಶಿಪ್–1ರ ಯೋಜನಾ ವೆಚ್ಚವನ್ನು ರೂ. 2304.49 ಕೋಟಿಯಿಂದ ರೂ. 2389.49 ಕೋಟಿಗೆ ಪರಿಷ್ಕರಣೆ ಮಾಡಲು

ii) ಕೆಶಿಪ್–1ರ ಯೋಜನಾ ಅವಧಿಯನ್ನು 31–10–2007 ರಿಂದ 31–07–2010 ರವರಿಗೆ ವಿಸ್ತರಿಸಲು ಹಾಗೂ

iii) ಕೆಶಿಪ್–1 ಯೋಜನೆಗೆ ಅಗತ್ಯವಿರುವ ರೂ. 85.00 ಕೋಟಿ ಹೆಚ್ಚುವರಿ ಮೊತ್ತವನ್ನು 2009–10ರ ಆರ್ಥಿಕ ಸಾಲಿನಲ್ಲಿ ನೀಡಿರುವ ರೂ. 400.00 ಕೋಟಿ ಅನುದಾನದಲ್ಲಿ ಕೆಶಿಪ್–1ರ ಕಾಮಗಾರಿಗಳಿಗೆ ಮಾತ್ರ ವೆಚ್ಚ ಮಾಡಲು ಮತ್ತು ಕಾಮಗಾರಿಗಳನ್ನು ಸಕ್ಷಮ ಪ್ರಾಧಿಕಾರಗಳಿಂದ ಅಗತ್ಯ ಅನುಮೋದನೆಯನ್ನು ಪಡೆದು ಹಾಗೂ ವಿಳಂಬದಿಂದ ವೆಚ್ಚ ಹೆಚ್ಚುವರಿಯಾಗದಂತೆ ಎಚ್ಚರವಹಿಸಿ ಭರಿಸಲು ಅನುಮತಿ ನಿಡಿದೆ.

**ಷರತ್ತುಗಳು :**

*There shall be no refund of the LD previously recovered

*Further LD shall be recovered as per the said decision

*Price escalation and rates payable shall be only as per contract provisions

*No. claim letter to be obtained from contractors towards granting of EOT to avoid any form of financial claims and disputes

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ : ಲೋಇ 765 ಅಕೋ–1/09, ದಿನಾಂಕ 23–10–2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ದೇವಿಪ್ರಸಾದ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 681 ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಟಿ.ಜಿ. ಮಹಾದೇವಸ್ವಾಮಿ, ನಿವೃತ್ತ ಸಹಾಯಕ ನಿರ್ದೇಶಕರು (ಉದ್ಯೋಗ), ಇವರ ದಂಡನಾ ಆದೇಶವನ್ನು ಪುನರ್ ಪರಿಷ್ಕರಿಸುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಎಲ್ 185 ಇಟಿಎಕ್ಸ್ 1989, ದಿನಾಂಕ 28–5–2004.
2. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 3388/2004ರಲ್ಲಿ ನೀಡಿರುವ ಅಂತಿಮ ಆದೇಶ ದಿನಾಂಕ 4–6–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಟಿ.ಜಿ. ಮಹಾದೇವಸ್ವಾಮಿ, ನಿವೃತ್ತ ಸಹಾಯಕ ನಿರ್ದೇಶಕರು (ಉದ್ಯೋಗ), ಇವರಿಗೆ ಸಹಾಯಕ ನಿರ್ದೇಶಕರ ಹುದ್ದೆಯಿಂದ ಕೆಳಗಿನ ದರ್ಜೆಯ ಉದ್ಯೋಗಾಧಿಕಾರಿ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(5) ರನ್ವಯ ಹಿಂಬಡ್ತಿ

ನೀಡಿ ದಂಡನೆ ವಿಧಿಸಲಾಗಿತ್ತು ಹಾಗೂ ಇವರ ವೇತನವನ್ನು ಉದ್ಯೋಗಾಧಿಕಾರಿ ಹುದ್ದೆಯ ವೇತನ ಶ್ರೇಣಿ ರೂ. 5575–10620 ರಲ್ಲಿ ಕನಿಷ್ಠ ಮೂಲ ವೇತನ ರೂ. 5575/–ಕ್ಕೆ ನಿಗದಿಪಡಿಸಲಾಗಿತ್ತು.

ಸದರಿ ಆದೇಶವನ್ನು ಪ್ರಶ್ನಿಸಿ ಶ್ರೀ ಟಿ.ಜಿ. ಮಹಾದೇವಸ್ವಾಮಿ, ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 3388/2004 ನ್ನು ಸಲ್ಲಿಸಿದ್ದರು. ಈ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 4–6–2009 ರಂದು ಅಂತಿಮ ತೀರ್ಪನ್ನು ನೀಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ತನ್ನ ಅಂತಿಮ ತೀರ್ಪಿನ ಕಂಡಿಕೆ (7) ರಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಈ ಕೆಳಗಿನಂತೆ ಆದೇಶಿಸಿರುತ್ತದೆ.

"For the abovesaid reasons, we allow the application in part. While affirming the conclusion of the disciplinary authority, that the charge had been proved, we modify the penalty imposed in Government Order No. SWL 185 ETX 1989, dt. 28-5-2004 restricting the imposition of penalty till 30-3-2006. The post of the applicant at the time of imposition of penalty and the salary he was getting at that time shall stand restored on 31-3-2006 and pensionary benefits shall be fixed on the basis of the same. If this necessitates re-fixation of pension, the same shall be done within a period of three months."

ಈ ತೀರ್ಪಿನ ಅನುಸಾರ ಶ್ರೀ ಟಿ.ಜಿ. ಮಹಾದೇವಸ್ವಾಮಿ ಇವರ ದಂಡನಾ ಆದೇಶವನ್ನು ಪುನರ್ ಪರಿಷ್ಕರಿಸುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ತೀರ್ಮಾನಿಸಲಾಗಿದ್ದು, ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 17 ಇಟಿಎಕ್ಸ್ 2010, ಬೆಂಗಳೂರು, ದಿನಾಂಕ: 9–3–2010**

ಶ್ರೀ ಟಿ.ಜಿ. ಮಹಾದೇವಸ್ವಾಮಿ, ನಿವೃತ್ತ ಸಹಾಯಕ ನಿರ್ದೇಶಕರು (ಉದ್ಯೋಗ), ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 185 ಇಟಿಎಕ್ಸ್ 1989 ದಿನಾಂಕ 28–5–2004ರ ಮೂಲಕ ವಿಧಿಸಲಾದ ದಂಡನೆಯ ದಿನಾಂಕ : 30–3–2006ರ ತನಕ ಮಾತ್ರ ಜಾರಿಯಲ್ಲಿರುತ್ತದೆ. ದಿನಾಂಕ : 31–3–2006 ರಿಂದ ಅನ್ವಯವಾಗುವಂತೆ ಇವರ ವೇತನವನ್ನು ಅವರ ಹಿಂದಿನ ಹುದ್ದೆಯಾದ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಪಡೆಯುತ್ತಿದ್ದ ವೇತನಕ್ಕೆ ಪುನರ್ ಸ್ಥಾಪಿಸಲಾಗಿದೆ. ಹಾಗೂ ಇವರ ನಿವೃತ್ತ ವೇತನ ಹಾಗೂ ನಿವೃತ್ತ ಸೌಲಭ್ಯಗಳನ್ನು ಮರುಸ್ಥಾಪಿಸಲ್ಪಟ್ಟ ವೇತನ ಮೇಲೆ ನಿಗದಿಪಡಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 687

(ಎ.ಎಸ್. ವಿಶ್ವೇಶ್ವರಯ್ಯ)
ಪೀಠಾಧಿಕಾರಿ
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಅರುಣಕುಮಾರ ವಿ. ಸಾಳುಂಕೆ, ಪಿ.ಎಸ್.ಐ. ಖಡೇಬಜಾರ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ : ಸಿಬ್ಬಂದಿ 2ಎ/ಪಿಆರ್/124/2008 ಆಪು ಸಂ : 58/08, ದಿನಾಂಕ 27–1–2008
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ : ಅಪೀಲು (9)ಉವ/2009, ದಿನಾಂಕ 29–5–09
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ, ದಿನಾಂಕ 11–6–09
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) 26/2009–10, ದಿನಾಂಕ 22–10–2009.

**ಪ್ರಸ್ತಾವನೆ :**

ಶ್ರೀ ಅರುಣಕುಮಾರ ವಿ. ಸಾಳುಂಕೆ, ಪಿ.ಎಸ್.ಐ. ಖಡೇಬಜಾರ ಪೊಲೀಸ್ ಠಾಣೆ, ಬೆಳಗಾವಿ, ಇವರು ಖಾನಾಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

" ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ಶ್ರೀಮತಿ ವಿನೂತಾ ಸತೀಶ ನೇಸರಿ, ಸಾ: ಖಾನಾಪುರ ಇವರ ಆತ್ಮ ಸಂರಕ್ಷಣಾ ಆಯುಧ ಅನುಜ್ಞಾ ಪತ್ರದ ವಿಚಾರಣೆ ಕಾಲಕ್ಕೆ ವಿಳಂಬ ನೀತಿ ಅನುಸರಿಸಿರುವುದಲ್ಲದೇ ಠಾಣೆಯ ದಾಖಲಾತಿಗಳ ಬಗ್ಗೆ ವೈಯುಕ್ತಿಕ ಗಮನಹರಿಸದೇ ಕೇವಲ ಠಾಣೆಯ ಬರಹಗಾರರ ಮೇಲೆಯೇ ಜವಾಬ್ದಾರಿಯನ್ನು ವಹಿಸಿ, ಮೇಲಾಧಿಕಾರಿಗಳ ಆದೇಶವನ್ನು ಕಡೆಗಾಣಿಸಿ, ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 27-1-09ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 29-5-2009ರ ಆದೇಶದಲ್ಲಿ ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 118 ಪೊಸಿಅ 2009, ಬೆಂಗಳೂರು, ದಿನಾಂಕ: 8-2-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅರುಣಕುಮಾರ ವಿ. ಸಾಳುಂಕೆ, ಪಿ.ಎಸ್.ಐ. ಖಡೇಬಜಾರ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 688

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಸುವರ್ಣ ವಸ್ತ್ರ ನೀತಿ 2008-2013ರಡಿ ಜವಳಿ/ಸಿದ್ಧ ಉಡುಪು ಬೃಹತ್ ಯೋಜನೆಗಳ ಸ್ಥಾಪನೆ- ಸಮನ್ವಯ ಸಮಿತಿ ರಚಿಸುವ ಬಗ್ಗೆ

**ಸರ್ಕಾರದ ಆದೇಶ ಸಂಖ್ಯೆ : ವಾಕೈ 21 ಜವಿಮ 2009, ಬೆಂಗಳೂರು, ದಿನಾಂಕ 3-3-2010**

**ಪ್ರಸ್ತಾವನೆ :**

ಸುವರ್ಣ ವಸ್ತ್ರ ನೀತಿ ಯೋಜನೆಯಡಿ ವಲಯ-(1) ಮತ್ತು (2)ರಲ್ಲಿ ಒಂದೇ ಯೋಜನೆಗಾಗಿ ಬಂಡವಾಳ ವೆಚ್ಚದ ಸಲುವಾಗಿ ರೂ. 100 ಕೋಟಿ ಮತ್ತು ಅದಕ್ಕೂ ಹೆಚ್ಚಿನ ಹೂಡಿಕೆ ಮಾಡುವ ಹಾಗೂ ಕನಿಷ್ಠ 500 ನೇರ ಉದ್ಯೋಗಾವಕಾಶಗಳನ್ನು ಕಲ್ಪಿಸುವ ಜವಳಿ ಮತ್ತು ಉಡುಪು ತಯಾರಿಕ ಘಟಕಗಳನ್ನು ಬೃಹತ್ ಯೋಜನೆಯೆಂದು ವರ್ಗೀಕರಿಸಿ, ಈ ಬೃಹತ್ ಯೋಜನೆಗಳಿಗೆ ಪ್ರತ್ಯೇಕವಾಗಿ ಪ್ರಕರಣಗಳನ್ನು ಆಧರಿಸಿ, ವಿಶೇಷ ನೆರವು ಒದಗಿಸಲಾಗುವುದೆಂದು ತಿಳಿಸಲಾಗಿದೆ.

ಸುವರ್ಣ ವಸ್ತ್ರ ನೀತಿ ಅನುಷ್ಠಾನಕ್ಕೆ ಸರ್ಕಾರವು ಉನ್ನತ ಮಟ್ಟದ ಅಧಿಕಾರಿಯುಕ್ತ ಸಮಿತಿ, ರಾಜ್ಯ ಮಟ್ಟದ ಯೋಜನಾ ಅನುಷ್ಠಾನ ಸಮಿತಿ ಹಾಗೂ ಜಿಲ್ಲಾ ಮಟ್ಟದ ಯೋಜನಾ ಉಸ್ತುವಾರಿ ಸಮಿತಿಗಳನ್ನು ಅಲ್ಲದೆ, ಸಿದ್ಧ ಉಡುಪು ವಲಯಗಳ ಸ್ಥಾಪನೆಗೆ ಕಾರ್ಯಪಡೆ ಸಮಿತಿ ಹಾಗೂ ಸಲಹಾ ಸಮಿತಿಗಳನ್ನು ರಚಿಸಿದೆ.

ರಾಜ್ಯ ಹಾಗೂ ಹೊರ ರಾಜ್ಯದ ಉದ್ದಿಮೆದಾರರನ್ನು ಆಕರ್ಷಿಸಿ, ಮೆಗಾ ಯೋಜನೆಗಳ ಅನುಷ್ಠಾನಕ್ಕೆ ಕ್ರಮವಹಿಸಲು ಸಮನ್ವಯ ಸಮಿತಿಯನ್ನು ರಚಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಹಾಗೂ ರಾಜ್ಯದಲ್ಲಿ ಬಂಡವಾಳ ಹೂಡಿಕೆದಾರರ ಸಮಾವೇಶಗಳನ್ನು ಆಯೋಜಿಸಿರುವ ಹಿನ್ನೆಲೆಯಲ್ಲಿ, ಸುವರ್ಣ ವಸ್ತ್ರ ನೀತಿ ಅಡಿ ಮೆಗಾ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿಯೊಂದನ್ನು ರಚಿಸಲು ಸರ್ಕಾರವು ಉದ್ದೇಶಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯದ ಹಾಗೂ ಹೊರ ರಾಜ್ಯದ ಉದ್ದಿಮೆದಾರರನ್ನು ಆಕರ್ಷಿಸಿ, ಮೆಗಾ ಯೋಜನೆಗಳ ಅನುಷ್ಠಾನಕ್ಕೆ ಕ್ರಮವಹಿಸಲು ಸರ್ಕಾರವು, ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮನ್ವಯ ಸಮಿತಿಯನ್ನು ರಚಿಸಿದೆ :-

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿ<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಅಧ್ಯಕ್ಷರು |
| 2. | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ<br>ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ | ಸದಸ್ಯರು |
| 3. | ಸರ್ಕಾರದ ಉಪ ಕಾರ್ಯದರ್ಶಿ (ಜವಳಿ)<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 4. | ಆಂತರಿಕ ಆರ್ಥಿಕ ಸಲಹೆಗಾರರು<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 5. | ಐ.ಎಲ್ & ಎಫ್.ಎಸ್. ಸಂಸ್ಥೆಯ<br>ಪ್ರತಿನಿಧಿಗಳು | ಸದಸ್ಯರು |
| 6. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ<br>ವಿದ್ಯುತ್‌ಮಗ್ಗಗಳ ಅಭಿವೃದ್ಧಿ ನಿಗಮ ನಿ., ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು ಈ ಕೆಳಕಂಡ ಉಲ್ಲೇಖ ಮತ್ತು ನಿಬಂಧನೆಗಳ ಅಡಿ ಕಾರ್ಯನಿರ್ವಹಿಸತಕ್ಕದ್ದು :-

1. ರಾಜ್ಯ ಮತ್ತು ಹೊರ ರಾಜ್ಯದ ಜವಳಿ ಉದ್ದಿಮೆದಾರರ ಜೊತೆ ಸಂಪರ್ಕ ಬೆಳೆಸಿ, ಕರ್ನಾಟಕದಲ್ಲಿ ವಿಶೇಷವಾಗಿ ದೊರಕುವ ಪ್ರೋತ್ಸಾಹಗಳನ್ನು ಮನದಟ್ಟು ಮಾಡಿ, ಕರ್ನಾಟಕದಲ್ಲಿ ಉದ್ದಿಮೆ ಸ್ಥಾಪಸಲು ಕ್ರಮಕೈಗೊಳ್ಳುವುದು.
2. ವಿವಿಧ ಇಲಾಖೆಗಳ ಜೊತೆಗೆ ಸಂಪರ್ಕ ಬೆಳೆಸಿ ಉದ್ದಿಮೆದಾರರಿಗೆ ಉದ್ದಿಮೆ ಸ್ಥಾಪಿಸಲು escort service ಒದಗಿಸುವುದು.
3. ಸರ್ಕಾರದ ಮಟ್ಟದಲ್ಲಿ ವಿವಿಧ ಇಲಾಖೆಗಳಲ್ಲಿ ತ್ವರಿತ ಅನುಮೋದನೆಗಳನ್ನು ಪಡೆಯಲು ಕ್ರಮ ವಹಿಸುವುದು.
4. ಉದ್ದಿಮೆಗೆ ಬೇಕಾದ ಜಮೀನನ್ನು ಹಂಚಿಕೆ ಪಡೆಯಲು ಕೆ.ಐ.ಎ.ಡಿ.ಬಿ/ಜಿಲ್ಲಾಧಿಕಾರಿಗಳ ಜೊತೆಗೆ ಪತ್ರ ವ್ಯವಹಾರ ಮಾಡುವುದು.
5. ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಯು Single Window Agency ಮೂಲಕ ಸಂಬಂಧಪಟ್ಟ ಮಂಜೂರಾತಿ, ಅನುಮೋದನೆ ಮುಂತಾದವುಗಳ ಕಾರ್ಯ ನಿರ್ವಹಣೆಯನ್ನು ಹೇಗೆ ನಿರ್ವಹಿಸುತ್ತಿದೆಯೋ ಅದೇ ಮಾದರಿಯಲ್ಲಿ ಜವಳಿ ಉದ್ದಿಮೆಗೆ ಸಂಬಂಧಪಟ್ಟ ಮಂಜೂರಾತಿ, ಅನುಮೋದನೆ ಮುಂತಾದವುಗಳ ಕಾರ್ಯನಿರ್ವಹಣೆಯನ್ನು ನಿರ್ವಹಿಸುವುದು ಹಾಗೂ ಇದಕ್ಕೆ ಶುಲ್ಕವನ್ನು ಪಡೆಯಲು ಅನುಮೋದಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 689

**(ಎಂ.ಎಸ್. ಗಣಪತಿ)**
ಸರ್ಕಾರದ ಉಪ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ದಿನಾಂಕ : 31-3-2010ರೊಳಗೆ ನಡೆಸಬೇಕಾಗಿರುವ ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಕಾರ್ಯದರ್ಶಿಯವರ ಪತ್ರ ಸಂಖ್ಯೆ : ಕ.ರಾ.ನ್ಯಾ.ಇ.ನೌ.ಗೃ.ನಿ.ಸ.ಸಂ.ನಿ/ 49/2009-10, ದಿನಾಂಕ :

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2)ರಡಿ ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದು ಮಾರ್ಚ್ 2010 ರಲ್ಲಿ ತನ್ನ ಆಡಳಿತ ಸಮಿತಿಗೆ ಚುನಾವಣೆಯನ್ನು ನಡೆಸಬೇಕಾಗಿದ್ದು ಸದರಿ ಸಂಘದ ಕಾರ್ಯದರ್ಶಿಯವರು ಮೇಲೆ ಓದಲಾದ ಪತ್ರದಲ್ಲಿ ಸದರಿ ಸಂಘದ ಆಡಳಿತ ಮಂಡಳಿಯ ಚುನಾವಣೆಯನ್ನು ಮಾರ್ಚ್ 2010 ರಲ್ಲಿ ನಡೆಸಿದಾದಲ್ಲಿ ಸಂಘದಲ್ಲಿ ಇರುವ ಸದಸ್ಯರ ಪೈಕಿ ಸುಮಾರು ಅರ್ಧ ಭಾಗದಷ್ಟು ಸದಸ್ಯರು ಉತ್ತರ ಕರ್ನಾಟಕದವರೇ ಇದ್ದು ರಾಜ್ಯದ ವಿವಿಧ ಭಾಗಗಳಿಂದ ಬೆಂಗಳೂರಿಗೆ ಬಂದು ತಮ್ಮ ಮತವನ್ನು ಚಲಾಯಿಸಬೇಕಾಗಿರುವುದರಿಂದ ಸಂಘದ ಸದಸ್ಯರು ಸರ್ಕಾರ ಹಮ್ಮಿಕೊಂಡಿರುವ ನೆರೆ ಸಂತ್ರಸ್ತರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ದಿನನಿತ್ಯ ಪಾಲುಗೊಳ್ಳುವುದರಿಂದ ಇವರುಗಳು ಈ ಕೆಲಸವನ್ನು ಬಿಟ್ಟು ಬೆಂಗಳೂರಿಗೆ ತೆರಳಿ ಚುನಾವಣೆಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಮತ್ತು ಪ್ರಜಾಸತ್ತಾತ್ಮಕವಾಗಿ ಚುನಾವಣೆಯಲ್ಲಿ ಮತ ಚಲಾಯಿಸಿ ತಮ್ಮ ಹಕ್ಕನ್ನು ಪ್ರತಿಪಾದಿಸುವಲ್ಲಿ ವಂಚಿತರಾಗುವುದರಿಂದ ಮಾರ್ಚ್ 2010ರಲ್ಲಿ ನಡೆಯಬೇಕಿರುವ ಆಡಳಿತ ಸಮಿತಿಯ ಚುನಾವಣೆಯನ್ನು ಒಂದು ವರ್ಷ ಕಾಲ ಮುಂದೂಡಬೇಕೆಂದು ಕೋರಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 37 ಸಿಎಲ್ಎಂ 2010, ಬೆಂಗಳೂರು, ದಿನಾಂಕ: 20-2-2010**

ಮೇಲಿನ ಪರಿಸ್ಥಿತಿಯಲ್ಲಿ ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 39ಎ (4) ಮತ್ತು 121 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶದ ಸಂಖ್ಯೆ : ಸಿಒ 16 ಸಿಎಲ್ಎಂ 2010, ದಿನಾಂಕ : 22-1-2010 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 30-9-2010 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

ಸೂಚನೆ : ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30-9-2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 690

**(ಆರ್.ಎಸ್. ಹುಚ್ಚಾಚಾರಿ)**
**ವಿಶೇಷ ಕರ್ತವ್ಯಾಧಿಕಾರಿ ಹಾಗೂ**
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ : 22–3–2010ರೊಳಗೆ ನಡೆಸಬೇಕಾಗಿರುವ ಚುಂಚನೂರ ಕೃಷಿ ಸಹಕಾರ ಬ್ಯಾಂಕ್ ನಿಯಮಿತ, ಚುಂಚನೂರ, ಬೆಳಗಾವಿ ಜಿಲ್ಲೆ ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು, ಚುಂಚನೂರ ಕೃಷಿ ಸಹಕಾರ ಬ್ಯಾಂಕ್ ನಿಯಮಿತ, ಚುಂಚನೂರ, ಇವರ ಪತ್ರ ಸಂಖ್ಯೆ ಮತ್ತು ದಿನಾಂಕ ಇರುವುದಿಲ್ಲ.

**2**. ಮಾನ್ಯ ಸಹಕಾರ ಸಚಿವರ ಕಛೇರಿಯ ಪತ್ರದ ಸಂಖ್ಯೆ : ಸಸಕ/219/2010, ದಿನಾಂಕ : 11–2–2010.

**ಪ್ರಸ್ತಾವನೆ :**

ಚುಂಚನೂರ ಕೃಷಿ ಸಹಕಾರ ಬ್ಯಾಂಕ್ ನಿಯಮಿತ, ಚುಂಚನೂರ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದರ ಕಾರ್ಯಕ್ಷೇತ್ರದಲ್ಲಿ ಬರುವ ಮೂರು ಗ್ರಾಮಗಳಲ್ಲಿ ಸತತ ಒಂದು ತಿಂಗಳ ಕಾಲ ಸುರಿದ ಅಕಾಲಿಕ ಮಳೆಯಿಂದ ಶೇಕಡ 75 ರಷ್ಟು ಮನೆಗಳು ಕುಸಿದಿದ್ದು ಹಾಗೂ ಬೆಳೆಗಳು ಸಹ ಕೊಚ್ಚಿ ಹೋಗಿರುವುದರಿಂದ ಸದರಿ ಬ್ಯಾಂಕಿನ ಚುನಾವಣೆಯನ್ನು ಆರು ತಿಂಗಳ ಕಾಲ ಮುಂದೂಡುವಂತೆ ಮೇಲೆ ಓದಲಾದ (1)ರ ಮನವಿಯಲ್ಲಿ ಸದರಿ ಬ್ಯಾಂಕಿನ ಅಧ್ಯಕ್ಷರು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 39 ಸಿಎಲ್ಎಂ 2010, ಬೆಂಗಳೂರು, ದಿನಾಂಕ: 18–2–2010**

ಮೇಲಿನ ಪರಿಸ್ಥಿತಿಯಲ್ಲಿ ಚುಂಚನೂರ ಕೃಷಿ ಸಹಕಾರ ಬ್ಯಾಂಕ್ ನಿಯಮಿತ, ಚುಂಚನೂರ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ (4) ಮತ್ತು 121 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶದ ಸಂಖ್ಯೆ : ಸಿಒ 16 ಸಿಎಲ್ಎಂ 2010, ದಿನಾಂಕ : 22–1–2010 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಬ್ಯಾಂಕಿನ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 30–9–2010 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

ಸೂಚನೆ : ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30–9–2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 691

**(ಆರ್.ಎಸ್. ಹುಚ್ಚಾಚಾರಿ)**

**ವಿಶೇಷ ಕರ್ತವ್ಯಾಧಿಕಾರಿ ಹಾಗೂ**

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇಲ್ಲಿ ದಿನಾಂಕ 8–2–2010 ರಿಂದ 11–2–2010 ರವರೆಗೆ ನಡೆಯಲಿರುವ Efficient and Administration and Management ತರಬೇತಿ ಕೋರ್ಸಿಗೆ ಕೆ.ಎ.ಎಸ್. ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರ ಪತ್ರ ಸಂಖ್ಯೆ : TRG/F(NRM)CR-18/2008-09, ದಿನಾಂಕ 18–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 18–01–2010 ರ ಪತ್ರದಲ್ಲಿ ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇಲ್ಲಿ ದಿನಾಂಕ 8.2.2010 ರಿಂದ 11.2.2010 ರವರೆಗೆ ನಡೆಯಲಿರುವ Efficient Land Administration and Management ತರಬೇತಿ ಕೋರ್ಸಿಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು/ಸಹಾಯಕ ಆಯುಕ್ತರ ವೃಂದದ ಅಧಿಕಾರಿಗಳನ್ನು ನಿಯೋಜಿಸುವಂತೆ ಮಹಾನಿರ್ದೇಶಕರು ಕೋರಿದ್ದಾರೆ. ಸದರಿ ತರಬೇತಿಯಲ್ಲಿ ಪರಿಣಾಮಕಾರಿಯಾಗಿ ಭೂಮಿ ನಿರ್ವಹಣೆಗೆ ಸಂಬಂಧಿಸಿದ ಲ್ಯಾಂಡ್ ರೆಕಾರ್ಡ್ ನಿರ್ವಹಣೆ, ಭೂಸ್ವಾಧೀನ, ನೋಂದಣಿ, ಭೂಮಾಪನ, ಕಂದಾಯ ನ್ಯಾಯಾಲಯ, ಭೂ ಮಂಜೂರಾತಿ

